# ಶ್ರೀರಾಮಚರಿತವು

# ಬಾಲಕಾಂಡವು

ಮೊದಲನೆಯ ಆವೃತ್ತಿ

೧೯೩೪

ಸಾಲಿ ರಾಮಚಂದ್ರರಾಯರು

ನನ್ನ ಪರಮಮಿತ್ರರಾದ

**ರಂಗಾಚಾರ್ಯ ಅಪ್ಪಾಚಾರ್ಯ ಜಹಾಗಿರದಾರ**

ಎಮ್. ಎ., ಎಲ್ಎಲ್. ಬಿ. ಆಡ್ವೋಕೇಟ, ಮುಂಬಯಿ

ಇವರಿಗೆ

**ನೀವು**

**ಸತಾಂ ಸದ್ಭಿಃ ಸಂಗಃ ಕಥಮಪಿ ಹಿ ಪುಣ್ಯೇನ ಭವತಿ**

ಎಂಬುದರ ತಿರುಳನ್ನು

**ನನಗೆ**

ತಿಳಿಹಿದಿರಿ

ಉಣಿಸಿದಿರಿ

# ಪ್ರಕಾಶಕರ ನಿವೇದನ

ಧಾರವಾಡದ ಕರ್ನಾಟಕ ಹೈಸ್ಕೂಲಿನ ಸಾಹಿತ್ಯಸೇವಾ ಸಮಿತಿಯಿಂದ ಪ್ರಕಟವಾಗುತಲಿರುವ ಐದನೆಯ ಪುಸ್ತಕ ವಿದು. ಬಾಲೋಪಯುಕ್ತವೂ ಪ್ರೌಢವೂ ಆದ ವಿಷಯಗಳನ್ನು ಕುರಿತು ಉದ್ಗ್ರಂಥಗಳನ್ನು ಪ್ರಕಾಶನಗೊಳಿಸಿ ಕನ್ನಡಿಗರಲ್ಲಿ ಒಳ್ಳೆಯ ಸಾಹಿತ್ಯಾಭಿರುಚಿಯನ್ನು ಬೆಳಗಿಸಿ ಕನ್ನಡ ಸಾಹಿತ್ಯದ ಮಟ್ಟನ್ನು ಉನ್ನತಗೊಳಿಸುವುದೇ ಸಮಿತಿಯ ಹಿರಿದಾದ ಗುರಿ. ಈ ಗುರಿಯ ಸಾಧನಕ್ಕೋಸುಗ ಕರ್ನಾಟಕ ಹೈಸ್ಕೂಲಿನವರು ವರ್ಷವೊಂದಕ್ಕೆ ೨೦೦ ರೂ.ಗಳನ್ನು ತೆಗೆದಿಡಲು ನಿಶ್ಚಯಿಸಿರುವರು. ಕನ್ನಡ ಸಾಹಿತ್ಯವು ಬಗೆಬಗೆಯಾಗಿ ಬೆಳೆಯಬೇಕಾಗಿದೆ. ಶುದ್ಧ – ಸುಂದರವಾದ ಶೈಲಿಯಲ್ಲಿ ರಚಿಸಿದ ಸುಸಂಸ್ಕೃತ ಗ್ರಂಥಗಳು ಹೆಚ್ಚು ಹೆಚ್ಚಾಗಿ ಹುಟ್ಟಿ ಕನ್ನಡ ಸಾಹಿತ್ಯವು ಸಮೃದ್ಧಿಯನ್ನು ಪಡೆಯಬೇಕಾಗಿದೆ. ವಿವಿಧ ವಿಷಯಗಳನ್ನು ಕುರಿತು ವಿವಿಧ ರೀತಿಯಿಂದ ವಿಕಾಸಗೊಳಿಸಿದ ಕೃತಿಕುಸುಮಗಳಿಂದ ಕನ್ನಡಸಾಹಿತ್ಯೋದ್ಯಾನದ ವೈವಿಧ್ಯವೂ ಸೊಬಗೂ ಬಗೆಗೊಳ್ಳಬೇಕಾಗಿದೆ. ಈ ಮಹಾಕಾರ್ಯದಲ್ಲಿ ಕಾವ್ಯ, ತತ್ವಜ್ಞಾನ, ಶಿಕ್ಷಣ, ಸಮಾಜ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ಲಲಿತ, ಶಾಸ್ತ್ರೀಯ, ಪ್ರಬೋಧಕ ಗ್ರಂಥನಿರ್ಮಿತಿಯಿಂದ ಯಥಾಶಕ್ತಿ ನೆರವಾಗಬೇಕೆಂದು ಸಮಿತಿಯ ಉತ್ಕಟ ಅಭಿಲಾಷೆ. ಈ ನಮ್ಮ ಬಯಕೆ ಕರ್ನಾಟಕದ ನಾಮಾಂಕಿತ ಕವಿಗಳೂ ತಿರುಳುಗನ್ನಡದ ಅಭಿಮಾನಿಗಳೂ ಆದ

ಶ್ರೀ. ಸಾಲಿ ರಾಮಚಂದ್ರರಾಯರ ಪ್ರಾಸಾದಿಕ ವಾಣಿಯಿಂದ ಹೊರಹೊಮ್ಮುತಲಿರುವ ಕನ್ನಡ ರಾಮಾಯಣದ ಪ್ರಥಮ ಭಾಗವಾದ ಈ ಬಾಲಕಾಂಡದ ಪ್ರಕಾಶನದಿಂದ ಕೆಲಮಟ್ಟಿಗೆ ನೆರವೇರಿದೆ ಎಂದು ನಿವೇದಿಸಲು ನಮಗೆ ಬಹು ಸಂತೋಷವಾಗುತ್ತದೆ. ಇದರಂತೆ ಇವರೀ ನವರಾಮಾಯಣದ ಉಳಿದ ಭಾಗಗಳೂ ಯೋಗ್ಯಕಾಲದಲ್ಲಿ ನಮ್ಮಿಂದ ಪ್ರಕಟವಾಗುವಂತೆ ಕನ್ನಡ ಜನತಾಜನಾರ್ದನನು ಪ್ರೇರಿಸಲಿ ಎಂದು ಹಾರೈಸುವೆವು.

ನಮ್ಮ ಬಿನ್ನಹವನ್ನು ಮನ್ನಿಸಿ ಸಕಾಲದಲ್ಲಿ ಸಮುಚಿತವಾಗುವಂತೆ ಈ ಕೃತಿಗೆ ಮುನ್ನುಡಿಯನ್ನು ಬರೆದುಕೊಟ್ಟ ಕರ್ನಾಟಕ ಕಾಲೇಜಿನ ಪ್ರೊಫೆಸರರಾದ ಶ್ರೀಮಾನ್ ನಾಸನೂರವರಿಗೆ ನಾವು ಉಪಕಾರಬದ್ಧರಾಗಿರುವೆವು. ಆದರಂತೆಯೆ ಈ ಪುಸ್ತಕವನ್ನು ಅಂದವಾಗಿ ಅಚ್ಚು ಹಾಕಿ ಕೊಟ್ಟ ಮೋಹನ ಮುದ್ರಣಾಲಯದವರಿಗೂ ನಾವು ಕೃತಜ್ಞರಾಗಿದ್ದೇವೆ.

ಕರ್ನಾಟಕ ಹೈಸ್ಕೂಲ, ಧಾರವಾಡ
ಆಶ್ವಿನ ಶುದ್ಧ ಪಂಚಮಿ
ಚಾ. ವಿ. ವ. ೮೫೯

ವಾಮನ ರಾಮಚಂದ್ರ
ಮುಧೋಳಕರ
ಕಾರ್ಯದರ್ಶಿ
ಸಾಹಿತ್ಯ ಸೇವಾಸಮಿತಿ

# ಮುನ್ನುಡಿ

ವಾಲ್ಮೀಕಿರಾಮಾಯಣದ ದಿವ್ಯಸೌಂದರ್ಯವನ್ನು ಸರಸವಾದ ಕನ್ನಡದಲ್ಲಿ ತಂದಿರಿಸುತ್ತಲಿರುವ ಶ್ರೀಮಾನ್ ಸಾಲಿ ರಾಮಚಂದ್ರರಾಯರು ಕನ್ನಡಿಗರಿಗೆ ಚಿರಪರಿಚಿತರು. ಪರಿಶುದ್ಧವಾದ ಭಾವ–ಭಾಷೆಗಳ ಸಂಗಮವೆನಿಸಿದ ಇವರ ಸೊಗಸಿಗೆ ತಲೆದೂಗದ ರಸಿಕರೇ ಇಲ್ಲವೆನ್ನಬಹುದು. 'ಅವಿಸದು ನೊರೆಹಾಲನೊಲ್ಲೆನು' ಎಂದು ಇವರು ಸರಲ ಭಾವದಿಂದ ಹೃದಯವನ್ನು ಬಿಚ್ಚಿದಂದಿನಿಂದ ಇಂದಿನವರೆಗೆ ಇಪ್ಪತ್ತು ವರ್ಷಗಳ ಕಾಲದಲ್ಲಿ ಮಾಡಿದ ಕಾವ್ಯದೇವಿಯ ಉಪಾಸನೆಯ ಫಲವಾಗಿ ಹೊಸಗನ್ನಡ ಕಾವ್ಯಪ್ರಪಂಚದಲ್ಲಿ ಇವರಿಗೊಂದು ಮಾನ್ಯವಾದ ಸ್ಥಾನವು ಕೂಡ ಈಗಾಗಲೆ ಸಿಕ್ಕಿದೆ. ಹೀಗಿರು ವಾಗ ಇವರ ಕಾವ್ಯಕ್ಕೆ ಇನ್ನೊಬ್ಬರ ಮುನ್ನುಡಿ ಬೇಡವೇ ಬೇಡ. ಆದರೂ ಇವರು ಕೈಕೊಂಡ ಮಹಾಕಾರ್ಯದ ಸ್ವರೂಪ–ಸಿದ್ಧಿಗಳ ವಿಷಯವನ್ನು ಪ್ರಸ್ತಾವನೆಯ ರೂಪವಾಗಿ ಹೇಳಿದರೆ ಕಾವ್ಯವಾಚನಕ್ಕೆ ಅನುಕೂಲವಾಗಬಹುದು. ಅಂತು ಮುನ್ನುಡಿ ಬೇಕೆಂಬ ನಿರ್ಧಾರವಾಯಿತು; ಇದನ್ನು ನಾನೇ ಬರೆಯಬೇಕೆಂದು ವಿಧಿಸಿಯೂ ಆಯಿತು. ನಾನು ಇನ್ನೂ 'ಜಾಣಿನ ಭಾರದಿಂ ಕೆಡದವ'ನೆಂಬ ಭಾವನೆಯಿಂದ ನನ್ನನ್ನು ಆರಿಸಿಕೊಂಡಿರುವರೇನೋ ಎಂದು ಸಂದೇಹ ಮಾತ್ರ ನನಗೆ ಈಗ ಬರುತ್ತಲಿದೆ. ಅದೇನಿದ್ದರೂ ಶ್ರೀಮಾನ್ ಸಾಲಿಯವರ

ಕೃತಿಗೆ ಮುನ್ನುಡಿಯನ್ನು ಬರೆಯುವುದು ಹೆಮ್ಮೆಯ ವಿಷಯ ವೆಂದು ನಾನು ದೃಢವಾಗಿ ನಂಬಿದ್ದೇನೆ.

ರಾಮಾಯಣದ ಕವಿಗಳ ಭಾರದಿಂದ ಆದಿಶೇಷನು ಕೂಡ ತಿಣುಕಿದನಂತೆ! ಅಂತೆ ನಮ್ಮ ಕುಮಾರವ್ಯಾಸನು 'ರಘುವರ ಚರಿತೆಯಲಿ ಕಾಲಿಡಲು ತೆರಪಿಲ್ಲ'ವೆಂದು ಹೇಳಿ ಭಾರತವನ್ನು ರಚಿಸಿದನು. ಆದರೂ ಆಮೇಲೆ ಹುಟ್ಟಿದ ರಾಮಾಯಣಗಳಿಗೆ ಲೆಕ್ಕವಿಲ್ಲ. ಇಂದಿನ ಭಾರತೀಯ ಸಾಹಿತ್ಯವನ್ನು ಪರಿಶೀಲಿಸಿದರೂ ಕಾವ್ಯ ನಾಟಕ ಕಥೆಗಳ ರೂಪವಾಗಿ ರಾಮಾಯಣವು ಮೈದೋರುತ್ತಿರುವುದನ್ನು ನಾವು ಕಾಣಬಹುದಾಗಿದೆ. ಇದರಿಂದ ಭಾರತೀಯರ ಜೀವನದಲ್ಲಿ ಈ ಮಹಾಕಾವ್ಯವು ಬೆರೆತುಹೋಗಿ ಸಾಹಿತ್ಯರೂಪದಲ್ಲಿ ಪ್ರತಿಬಿಂಬಿಸುತ್ತಿದೆಯೆಂಬುದು ಸ್ಪಷ್ಟವಾಗಿದೆ. ಜನಸಾಮಾನ್ಯರಿಗಂತೂ ಇದೊಂದು ಕಾವ್ಯಮಾತ್ರವಲ್ಲ, ಕಟ್ಟುಕಥೆಯಂತೂ ಮೊದಲೇ ಅಲ್ಲ. ರಾಮಾಯಣವೆಂದರೆ ಎಂದೋ ಬಾಳಿ ಬಯಲಾದವರ ಚರಿತೆಯೆಂಬ ದೃಷ್ಟಿಯೇ ಅವರಿಗಿಲ್ಲ. ರಾಮ ಲಕ್ಷ್ಮಣ ಸೀತೆಯರು ಇಂದಿಗೂ ಅವರ ಜೀವನಕ್ಕೆ ಸ್ಫೂರ್ತಿಯನ್ನು ಕೊಟ್ಟು ಕಳೆಯೇರಿಸುವ ಮಹಾಮಹಿಮರು; ಉತ್ತಮಜೀವನವನ್ನು ಎದುರಿಗಿರಿಸಿ ಜನಸಾಮಾನ್ಯರನ್ನು ಕೂಡ ಸಹಜವಾಗಿಯೆ ಮೇಲುಮೆಟ್ಟಲಿಗೆ ಸಾಗಿಸುವ ದಿವ್ಯಮೂರ್ತಿಗಳು. ಆದುದರಿಂದ ಇವರು ಮನಸೋಲುವುದು ರಾಮಾಯಣದ ಪ್ರಕೃತಿ ವರ್ಣನೆಗಲ್ಲ; ಅಲಂಕಾರಸಂಪತ್ತಿಗೂ ಅಲ್ಲ; ಆದರೆ ಆ ಶ್ರೀರಾಮಚಂದ್ರನ ದಿವ್ಯಚರಿತೆಗೆ, ಆ ಮೂಲಕ ವ್ಯಕ್ತವಾದ ಮಾನವಪ್ರಪಂಚದ ಆದರ್ಶರೂಪಕ್ಕೆ. ಈರೀತಿ ರಾಮಾಯಣವು ಜೀವನದಿಂದ ಹುಟ್ಟಿದರೂ ಜೀವನವನ್ನೇ ಅಂದಗೊಳಿಸಿ

ಭಾರತೀಯ ಸಂಸ್ಕೃತಿಯ ಅನುಪಮ ಸೌಂದರ್ಯಕ್ಕೆ ಕಾರಣವಾಗಿದೆ. ಎಂದರೆ ಸಾಹಿತ್ಯವು ಸಾಹಿತ್ಯವಾಗಿಯೇ ಉಳಿಯದೆ ಜನಜೀವನದಲ್ಲಿ ಒಂದಾಗಿ ತನ್ನ ಜನ್ಮವನ್ನು ಸಫಲಗೊಳಿಸಿಕೊಂಡಿದೆ. ಇದೇ ಸಾಹಿತ್ಯವು ಮಾಡಬೇಕಾದ ನಿಜವಾದ ಕಾರ್ಯ; ಇದನ್ನು ಮಾಡಿದ ರಾಮಾಯಣವು ಸಾಹಿತ್ಯದೇವಿಯ ಶಿರೋರತ್ನ.

ಇಂತಹ ದಿವ್ಯಚರಿತೆ ಜನತೆಯ ಕೈಯಲ್ಲಿ ಸಿಕ್ಕಿತೆಂದರೆ ಅದರ ದಿವ್ಯತ್ವವು ಅಚ್ಚಳಿಯದೆ ಬಹಳ ಕಾಲ ಉಳಿಯದು. ಏಕೆಂದರೆ ಜನಸಾಮಾನ್ಯರು ಮಹಾಪುರುಷರ ವಿಷಯವಾಗಿ ಮಾಡಿಕೊಂಡ ಕಲ್ಪನೆಯೇ ಬೇರೆ. ಅವರ ಜೀವನದಲ್ಲಿ ಪವಾಡಗಳು, ಅದ್ಭುತಗಳು, ಚಮತ್ಕಾರಗಳು ಹೆಚ್ಚಿದಷ್ಟೂ ಅವರು ದೊಡ್ಡವರೆಂಬ ತಿಳಿವಳಿಕೆ ರೂಢಮೂಲವಾಗಿರುವುದರಿಂದ ಚರಿತೆಯಲ್ಲಿ ಅದ್ಭುತಗಳು ಸೇರುವುವು. ಇದರಿಂದ ಮೂಲದ ಸೊಗಸು ನಾಶವಾಗಿ ಮಹಾಪುರುಷರು ಬೇಗನೆ ಅವತಾರಿಗಳಾಗುವ ಸಂಭವವೇ ಹೆಚ್ಚು. ಆ ಮೇಲೆ ಅವರು ಮಾಡುವುದೆಲ್ಲ ಲೀಲಾಮಾತ್ರವೇ ಆಗಿ ತೋರುವುದರಿಂದ ಮಾನವಜೀವನವು ಕೂಡ ಆ ದೇವಪದವಿಯನ್ನು ಪಡೆಯ ಬಲ್ಲದೆಂಬ ಭಾವನೆಗೆ ಪುಟವಿಲ್ಲದಂತಾಗುತ್ತದೆ. ಶ್ರೀರಾಮ ನದೂ ಇದೇ ಹಾಡು! "ಭೂಭಾರಚ್ಛೇದವಿನೋದಿಯಾದ ಶ್ರೀಮನ್ನಾರಾಯಣನು ಭೂಮಿಯಲ್ಲಿ ಅವತರಿಸಿರುವುದರಿಂದ ಅವನು ಮಾಡುವುದೆಲ್ಲ ನಟನೆ. ಅವನಿಗೆ ಸುಖವಿಲ್ಲ, ದುಃಖ ವಿಲ್ಲ. ಇದೇ ರೀತಿ ಲೋಕಮಾತೆಯಾದ ಶ್ರೀಮನ್ಮಹಾ ಲಕ್ಷ್ಮಿಯೇ ಸೀತಾದೇವಿಯಾಗಿ ಜನಿಸಿರುವುದರಿಂದ ಅವಳು ಕಷ್ಟದಿಂದ ಗೋಳಿಡುವುದು ಕೂಡ ಬರಿಯ ತೋರಿಕೆಯೆ,"

ಎಂಬ ಸಂಬಂಗೆಯೋ ಬೆಳೆದು ಪುರಾಣಕಾಲದ ಶ್ರೀರಾಮನ ರೂಪವೇ ಬೇರೆಯಾಯಿತು. ಇಂದು ಹಲವರಿಗೆ ಕಾಣುವ ಪಾಪದರೂ ಈ ರೂಪವೇ ಹೊರತು ಮೊದಲಿನದಲ್ಲ. ನಮ್ಮ ನಾಟಕ ಸಂಘಗಳಂತೂ ಇನ್ನೂ ಮುಂದುವರಿದು ಕಂಪನಿಯ ರಾಮನನ್ನು ಹುಟ್ಟಿಸಿಕೊಂಡಿರುವ ವಿಷಯವು 'ಸಂಪೂರ್ಣ ರಾಮಾಯಣ'ವನ್ನು ನೋಡಿದವರಿಗೆ ತಿಳಿದೇ ಇದೆ. ಈ ಜೋಲುಮೋರೆಯ ರಾಮನನ್ನು ಮಾತ್ರ ತಿಳಿದವರಾದ ಕೆಲವರು ಇವನಿಗೆ 'ಅಳುಬುರುಕ'ನೆಂಬ ಬಿರುದನ್ನು ಕೊಡ ದಯಪಾಲಿಸುವ ಸಾಹಸವನ್ನು ಮಾಡಿರುವರು. ಇದು ನಿಜವಾಗಿದ್ದರೆ ರಾಮಾಯಣವು ಪ್ರಾಚೀನಭಾರತದ ದಿವ್ಯ ಸನಾತನ ವಾಣಿಯೆನಿಸುತ್ತಿರಲಿಲ್ಲ. ರಾಮನು ಪುರುಷೋತ್ತಮಪದವಿಗೆ ಅರ್ಹನಾಗುತ್ತಿರಲಿಲ್ಲ. ಸೀತಾದೇವಿ ಗ್ರೀಕ ಕವಿ ಹೋಮರ್ ಎಂಬವನ ಹೆಲೆನ್ನಿಗಿಂತ ಮೇಲೆಂಬ ಪ್ರಶಸ್ತಿಯನ್ನು ಪಡೆಯುತ್ತಿರಲಿಲ್ಲ. ನಿಜವಾಗಿಯೂ ರಾಮಾಯಣವು ಕಾಂತಿಯುತವಾದ ಅಮೂಲ್ಯ ರತ್ನವಾಗಿದ್ದರೂ ಕಾಲಾಂತರದಿಂದ ದೂಳಿ ಮುಸುಕಿ, ಅದರ ಕಾಂತಿ ಮಸುಳಿಸಿದೆ. ಈಗ ಮಾಡಬೇಕಾಗಿರುವುದು ಆ ದೂಳಿಯನ್ನು ತೆಗೆದು ರತ್ನವನ್ನು ಬೆಳಗಿಸುವ ಕೆಲಸ.

ಹೀಗಿರುವಾಗ ಶ್ರೀಮಾನ್ ಸಾಲಿಯವರು ವಾಲ್ಮೀಕಿ ರಾಮಾಯಣದ ಸೌಂದರ್ಯವನ್ನು ಮನಸಾರೆ ಸವಿದು ತಮಗಾದ ಆನಂದವನ್ನು ಇತರರೂ ಸವಿವಂತಾಗಲೆಂದು ಈ ಕಾವ್ಯವನ್ನು ಬರೆದಿರುವುದು ಅಭಿನಂದನೀಯವಾಗಿದೆ. ಇವರಿಗಾದರೂ ಪುರಾಣದ ರಗಳೆ ಬೇಡವಾಗಿದೆ. ಅಂತೆ 'ಶ್ರೀ-ರಘುಕುಲಮಣಿ **ವೀರಶಿರೋಮಣಿ ಕಾರುಣಿಕಾಗ್ರಣಿ**'

ಯಾದ ಉದಾತ್ತ ರಾಘವನ ಚರಿತವನ್ನು ಇಲ್ಲಿ ಹೇಳಿದ್ದಾ
ರೆಯೇ ಹೊರತು ಶೇಷಶಾಯಿಯಾದ ವಿಷ್ಣುವಿನ ಲೀಲೆಯ
ನ್ನಲ್ಲ. ಈಗ ಪ್ರಕಟವಾಗುತ್ತಿರುವುದು ಬಾಲಕಾಂಡ ಮಾತ್ರ
ವಾಗಿರುವುದರಿಂದ ಶ್ರೀರಾಮನ ಸಂಪೂರ್ಣ ಜೀವನವು ಇವ
ರಿಗೆ ಯಾವ ರೀತಿ ಕಂಡಿದೆಯೆಂಬುದನ್ನು ಹೇಳಲಾಗದು.
ಆದರೂ ಇಲ್ಲಿ ರಾಮನು ಮಾಡುವ ಕೆಲಸಗಳಿಂದ, ಆಡುವ
ಮಾತುಗಳಿಂದ, ಅವನ ವಿಷಯದಲ್ಲಿ ಉಪಯೋಗವಾದ
ವಿಶೇಷಣಗಳಿಂದ ಇವನೊಬ್ಬ ಉತ್ತಮಜೀವಿಯೆಂಬ ಭಾವ
ವನ್ನೇ ಶ್ರೀಮಾನ್ ಸಾಲಿಯವರು ಇಟ್ಟುಕೊಂಡಿರುವುದು
ಸ್ಪಷ್ಟವಾಗುತ್ತದೆ. ವಾಲ್ಮೀಕಿಯಾದರೂ ತನ್ನ ಕಥಾನಾಯಕ
ನನ್ನು 'ನರಚಂದ್ರಮ'ನೆಂದು ಒಗೆದೇ ಕಾವ್ಯರಚನೆ ಮಾಡಿದ
ನೆಂಬುದಕ್ಕೆ ರಾಮಾಯಣದಲ್ಲಿ ಸಾಕಷ್ಟು ನಿದರ್ಶನಗಳಿವೆ.
ಆದುದರಿಂದ ಈ ಕನ್ನಡ ಶ್ರೀರಾಮಚರಿತವು ನಿಜವಾಗಿಯೂ
ಭಾವಾನುವಾದವೆಂಬುದು ಈ ಮಾತಿನಿಂದ ಸ್ಪಷ್ಟವಾಗ
ಬಹುದು. ಇದನ್ನು ಓದಿದ ಹಾಗೆಲ್ಲ ಮೂಲದ ಹೃದಯವು
ಇಲ್ಲಿ ಯಥಾವತ್ತಾಗಿ ಇಳಿದಿದೆಯೆಂಬುದು ಯಾರಿಗಾದರೂ
ಹೊಳೆಯಲೇ ಬೇಕು.

ವಾಲ್ಮೀಕಿ ರಾಮಾಯಣವು ಮಹಾಕಾವ್ಯವಾಗಿರುವು
ದರಿಂದ ಅಲ್ಲಿಯ ವರ್ಣನೆಗಳಿಗೆ ಮಿತಿ ಇಲ್ಲ. ಯಾವುದನ್ನು
ವರ್ಣಿಸಿದರೂ ಸ್ವಲ್ಪ ಅತಿಯಾಗಿಯೇ ಬೆಳೆಯಿಸುವ ಪ್ರವೃತ್ತಿ-
ಯನ್ನು ಅಲ್ಲಿ ಕಾಣಬಹುದಾಗಿದೆ. ಸಾಕಷ್ಟು ಅವಕಾಶವಿದ್ದು
ಸುಖವಾಗಿ ಓದುವ ಅನುಕೂಲತೆ ದೊರೆವುದಾದರೆ ಈ ವರ್ಣನೆ
ಗಳನ್ನೆಲ್ಲ ಸವಿದು ಆನಂದಪಡೆಯಬಹುದು. ಆದರೆ ಇಂದಿನ
ನಮಗೆ ಎಲ್ಲವೂ ಸಾಧ್ಯವಿದ್ದ ಮಟ್ಟಿಗೆ ಸಂಕ್ಷೇಪ ರೂಪದಲ್ಲಿ

ಧ್ವರೆ ಒಳಿತೆಂದು ತೋರುವುದು. ಆದುದರಿಂದ ಶ್ರೀಮಾನ್ ಸಾಲಿಯವರು ತಮ್ಮ ಅನುವಾದದಲ್ಲಿ ಮೂಲದ ವರ್ಣನೆಗಳ ಸಾರವನ್ನು ಮಾತ್ರ ತಂದಿರಿಸಿರುವುದು ವಿಹಿತವೇ ಆಗಿದೆ. ಹಿಂದೆ 'ಸಮಸ್ತಭಾರತಮಸಪೂರ್ವಮಾಗೆ' ಹೇಳಿದ ನಮ್ಮ ಆದಿಕವಿ ಪಂಪನಾದರೂ ಭಾರತದ ಸಾರವನ್ನು ಇದೇ ರೀತಿಯಾಗಿ ಸಂಗ್ರಹಿಸಿ 'ಲೌಕಿಕ'ವನ್ನು ಬೆಳಗಿದನು. ಈ ಕವಿಯು ಸಂಪ್ರದಾಯದಲ್ಲಿ ವಿಶೇಷವಾದ ಅಭಿಮಾನವನ್ನು ಇಟ್ಟುಕೊಂಡವರೆಂದು ತೋರುವ ಶ್ರೀ. ಸಾಲಿಯವರು ಯುಕ್ತಾ-ಯುಕ್ತಪರಿಜ್ಞಾನವುಳ್ಳವರಾಗಿ ತಮ್ಮ ವರ್ಣನೆಗಳಲ್ಲಿ ಔಚಿತ್ಯವನ್ನಲ್ಲದೆ ಸಂಯಮವನ್ನೂ ಉಪಯೋಗಿಸಿರುವುದು ಆಶ್ಚರ್ಯವಲ್ಲ. ಇದರಿಂದ 'ಕಿರಿದರೊಳೆ ಪಿರಿದುಮರ್ಥಮನರಿಪುವ' ಶಕ್ತಿ ಈ ಕಾವ್ಯಕ್ಕೆ ಉಂಟಾಗಿರುವುದು ಒಂದು ವಿಶೇಷ ಲಾಭವೆಂದು ಹೇಳಬಹುದು. ಶ್ರವಣನಕಥೆ, ಅಹಲ್ಯೋದ್ಧಾರ, ಪರಶುರಾಮದರ್ಶನ ಮೊದಲಾದ ಯಾವ ಸಂದರ್ಭಗಳನ್ನು ಪರಿಶೀಲಿಸಿದರೂ ಈ ಮಾತು ಯಥಾರ್ಥವೆಂದು ಹೊಳೆಯದಿರದು. ಎಲ್ಲಕ್ಕೂ ಮುಖ್ಯವಾಗಿ ಶ್ರೀರಾಮಚರಿತೆಗೆ ಉಳಿದೆಲ್ಲವನ್ನೂ ಅಧೀನಪಡಿಸಿರುವುದರಿಂದ ಕಥೆಯ ಸ್ವಾರಸ್ಯವು ಹೆಚ್ಚಾಗಿರುವುದಲ್ಲದೆ ನಾಯಕನ ಚಿತ್ರವು ಸ್ಫುಟವಾಗಿ ಬೆಳಗುತ್ತಿದೆ.

ಶರಚತುಷ್ಪದಿಯೆಂದು ಕರೆಯಬಹುದಾದ ಇಲ್ಲಿಯ ವೃತ್ತವು ಕೂಡ ಅನುವಾದಕರ ಉದ್ದೇಶಕ್ಕೆ ಅನುಕೂಲವಾಗಿಯೇ ಇದೆ. ಏಕೆಂದರೆ ಇದರಲ್ಲಿ ಸಹಜಮನೋಹರವಾದ ತೀವ್ರಗತಿ ಇರುವುದರಿಂದ ಕಥೆ ತಡೆಯಿಲ್ಲದೆ ಮುಂದುವರಿಯುವುದಕ್ಕೆ ಅವಕಾಶವುಂಟಾಗಿದೆ. ಎಲ್ಲಿಯೂ 'ಸಲೆ, ವಲಂ

ಮಿಗೆ'ಗಳಿಗೆ ಶರಣು ಹೋಗದೆ, ಪ್ರಾಸವನ್ನಿಟ್ಟುಕೊಂಡರೂ ಕೃತಕತೆಗೆ ಇಂಬುಗೊಡದೆ ಸರಸವಾಗಿ, ಸುಗಮವಾಗಿ ಸಾಗುವ ಈ ಪದ್ಯಪ್ರವಾಹಕ್ಕೆ ಶರಚತುಷ್ಪದಿ ಬಹುಮಟ್ಟಿಗೆ ಕಾರಣವಾಗಿದೆಯೆನ್ನಬಹುದು. 'ಅಭಿಸಾರ'ದಲ್ಲಿ ಇದನ್ನುಪ ಯೋಗಿಸಿದಾಗಲೆ ತೋರಿದ ಪದ್ಯರಚನಾಕೌಶಲವು ಇಲ್ಲಿ ಇನ್ನೂ ಹೆಚ್ಚಾಗಿರುವುದರಿಂದ ಈ ವೃತ್ತವು ರಸಿಕರಿಗೆ ಮೆಚ್ಚಾಗುವುದರಲ್ಲಿ ಸಂದೇಹವಿಲ್ಲ.

ಈ ಅನುವಾದದಲ್ಲಿ ಇವೆಲ್ಲವನ್ನು ಮರೆಯಿಸುವ ಶೈಲಿಯು ಸೊಗಸಿದೆ. ಇಲ್ಲಿಯ ಪದ್ಯಗಳನ್ನೋದುವುದೆಂದರೆ ಮಧುರ ವಾದ ಗಾನವನ್ನು ಕೇಳಿದಂತೆ. ಕರ್ಕಶತೆಯ ಸ್ಪರ್ಶವಿಲ್ಲದ ಈ ಮೃದುಮಧುರವಾದ ಪದಸರಣಿ ಎಂತಹರನ್ನೂ ಮರುಳು ಗೊಳಿಸಬಹುದು.

ಸರಸತಿ ನುಡಿಯಿಪ
ಸರಸವಿಪಂಚಿಯು
ಸರದಂತೆ ಮನೋ-
ಹರವಾದುದಲೇ ! ೧

ದನಿಯೋ ಅಮೃತದ
ಕೆನೆಯೋ ? ಜಾನಕಿ,
ನಿನಗೆಂತಾದುದು
ದನಿಯಿಂತಿನಿದು ? ೨

ಮೊದಲಾದ ಪದ್ಯಗಳನ್ನೋದುವಾಗ ಈ ಕವಿಯನ್ನು ಕುರಿತೂ 'ನಿನಗೆಂತಾದುದು ದನಿಯಿಂತಿನಿದು ?' ಎಂದು ವಾಚಕರು ಬೆರಗುಗೊಂಡು ನುಡಿದರೆ ಆಶ್ಚರ್ಯವಲ್ಲ. ಈ

ಬಗೆಯ ಪದಮಾಧುರ್ಯವನ್ನು ತರುವುದಕ್ಕಾಗಿ 'ತುಂಗ ತರಂಗ ಭಂಗುರ ಪಯೋಧಿಪರೀತ ಮಹಾಮಹೀತಳಾ- ಲಿಂಗಿತ ಕೀರ್ತಿ' ಎಂಬ ಶೈಲಿಯನ್ನು ಅನುಕರಿಸುವುದಾದರೆ ಇಂದಿನ ನಮಗೆ ಅದೆಂದಿಗೂ ಸರಿದೋರದು. ಕನ್ನಡದಲ್ಲಿಯೇ ಅಡಿತುಕೊಂಡಿರುವ ಇಂಪನ್ನು ತೋರಿಸುವವರಿಗೆ ಮಾತ್ರ ಮಾನ ದೊರೆವ ಕಾಲ ಈಗ ಬಂದಿದೆ. ಕನ್ನಡದ ಸಹಜ ಮಾಧುರ್ಯವನ್ನು ಹೆಚ್ಚಿಸುವುದಕ್ಕಾಗಿ 'ಕರ್ಮಣಿ ಸರ ದೊಳ್ ಚೆಂಬವಳಮಂ ಕೋದಂತಿರೆ' ಸಂಸ್ಕೃತವನ್ನು ಸೇರಿ ಸಿದರೆ ತಿಳಿದವರು ಬೇಡವೆನ್ನರು. ಈ ಮಾತುಗಳನ್ನು ಲಕ್ಷ್ಯ ದಲ್ಲಿಟ್ಟುಕೊಂಡರೆ ಶ್ರೀಮಾನ್ ನಾಲಿಯವರ ಶೈಲಿಯನ್ನು ಮೆಚ್ಚದವರು ವಿರಳವೆಂದೇ ಹೇಳಬೇಕು. ಎಲ್ಲೆಡೆ ಸರಳವಾ ದರೂ ಸರಸವಾದ ಪದರಚನೆ. ಪೂರ್ವದ ಕಾವ್ಯಗಳ ವ್ಯಾಸಂಗ ದಿಂದ ಬಂದ ನಯವನ್ನೂ ಇಲ್ಲಿ ಕಾಣಬಹುದಾಗಿದೆ. ಈ ಕಾರಣದಿಂದಲೇ ವ್ಯಾಕರಣದ ದೃಷ್ಟಿಯಿಂದ ಅಶುದ್ಧವಾದ ಪ್ರಯೋಗಗಳಿಗೆ ಇಲ್ಲಿ ಆಸ್ಪದವಿಲ್ಲ. ಕವಿಗಳು ನಿರಂಕುಶರಾ ಗಿರುವುದರಿಂದ ಭಾಷೆಯನ್ನು ತಮಗೆ ಬೇಕಾದಂತೆ ಮಾರ್ಪಡಿ ಸಿಕೊಳ್ಳುವ ಅಧಿಕಾರವೂ ಅವರಿಗಿದೆಯೆಂಬ ಭಾವವು ಈಚೆಗೆ ನಮ್ಮ ಕವಿಗಳಲ್ಲಿ ಬೆಳೆಯತೊಡಗಿದೆ. ಭಾವಗಳು ಪ್ರವಹಿಸು ವಾಗ ವ್ಯಾಕರಣದ ಕಟ್ಟುಗಳನ್ನು ಅವು ಲೆಕ್ಕಿಸವೆಂಬ ನೆವ ದಿಂದ ತಮತಮಗೆ ಬೇಕಾದ ರೀತಿಯಿಂದ ಕನ್ನಡವನ್ನು ವಿಕಾರಗೊಳಿಸುತ್ತಿರುವುದನ್ನೂ ಇಂದು ಕೆಲವರಲ್ಲಿ ನಾವು ಕಾಣಬಹುದಾಗಿದೆ.ಈ ರೀತಿಯ ಸ್ವಚ್ಛಂದಪ್ರವೃತ್ತಿಗೆ ತಡೆಹಾಕು ವುದು ಎಷ್ಟುಮಟ್ಟಿಗೆ ಸಾಧ್ಯವಾಗಿದೆ, ವಿಹಿತವಾಗಿದೆಯೆಂಬು ದನ್ನು ವಿಚಾರಿಸುವುದು ಇಲ್ಲಿ ಪ್ರಕೃತವಾಗಲಾರದು. ಆದರೂ

'ಶುಷ್ಕ ವೈಯಾಕರಣಿ'ಗಳಾಗದೆ ಭಾಷೆಯ ಶುದ್ಧಸ್ವರೂಪವನ್ನು ಕಾಪಾಡಿಕೊಳ್ಳುವ ಉದ್ದೇಶದಿಂದ ನಮ್ಮ ಲೇಖಕರು ಮುಂದುವರಿಯುವ ಕಾಲವು ಈಗ ಬಂದಿದೆಯೆಂದು ಹೇಳಬಹುದು. ಬಂಧನಗಳಿಂದ ಭಾವವ್ಯಂಜನಕ್ಕೆ ತೊಂದರೆಯಾಗುವುದೆನ್ನುವವರು ಈ ಬಾಲಕಾಂಡವನ್ನು ನೋಡಬೇಕು. ಎಂದರೆ, ಭಾಷೆಯನ್ನು ವಿಕಾರಗೊಳಿಸದೆ ಭಾವಗಳನ್ನು ಹೃದಯಂಗಮವಾಗಿ ವ್ಯಕ್ತಗೊಳಿಸುವುದು ಸಾಧ್ಯವೆಂಬ ಮಾತು ಇದರಿಂದ ಮನವರಿಕೆಯಾಗದಿರದು.

ಈ ರೀತಿ ತಿಳಿಗನ್ನಡದ ಸರಸವಾದ ಶೈಲಿಯಲ್ಲಿ ಶ್ರೀರಾಮನ ದಿವ್ಯಚರಿತವನ್ನು ಕಲಾಮಯವಾಗಿ ಚಿತ್ರಿಸಿದ ಶ್ರೀನಿವಾಸ ಶಾಲಿಯವರಿಗೆ ನಾವು ಕೃತಜ್ಞರಾಗಬೇಕಾಗಿದೆ. ಸಣ್ಣಮಕ್ಕಳು ಕೂಡ ಈ ಕಾವ್ಯದ ಮಾಧುರ್ಯಕ್ಕೆ ಮನಸೋತು ಹಾಡಿಹಾಡಿ ನಲಿಯಬಹುದಾದುದರಿಂದ ಇದು ನಮ್ಮ ಮುಂದಿನ ಪೀಳಿಗೆಯ ರಸಿಕ ಜೀವನಕ್ಕೆ ನೆರವಾಗಬಲ್ಲುದು. ಆದುದರಿಂದ ಇನ್ನುಳಿದ ಭಾಗಗಳಾದರೂ ಇದೇ ಬಗೆಯಾಗಿ ಪ್ರಕಟವಾಗುವಂತೆ ಕನ್ನಡಿಗರು ಈ ಮೊದಲನೆಯ ಭಾಗವನ್ನು ಆದರದಿಂದ ಬರಮಾಡಿಕೊಳ್ಳಲೆಂದು ಹಾರಯಿಸುವ

ಕರ್ನಾಟಕ ಕಾಲೇಜ,
ಧಾರವಾಡ
೧೩-೧೦-೧೯೩೪

**ಎ. ಟಿ. ಸಾಸನೂರ**

ಶ್ರೀಃ

# ಶ್ರೀರಾಮಚರಿತವು

## ಬಾಲಕಾಂಡವು

### ಪ್ರಥಮಾಧ್ಯಾಯವು

ಶ್ರೀರಘುಕುಲಮಣಿ
ವೀರಶಿರೋಮಣಿ
ಕಾರುಣಿಕಾಗ್ರಣಿ
ತಾರಕ ಶರಣು ೧

ಸ್ಫುರದಮಲದ್ಯುತಿ
ಗುರು ಕರುಣಾಘನ,
ಸುರಿಯಿಸು ಸರಿಯನು
ಕರುಣಾಮೃತದಾ ! ೨

ಕಿರಿದರೊಳೊರೆವೆನು
ವರಕವಿ ಮುನಿ ವಿ-
ಸ್ತರದೊರೆದಾ ರಘು-
ವರನ ಕತೆಯನು ೩

ಸರಯೂತೀರದೊ–
ಳಿರುವುದಯೋಧ್ಯಾ–
ಪುರವರಸನು ಭಾ–
ಸ್ಕರವಂಶಜನು ೪

ಅತುಲಪರಾಕ್ರಮಿ–
ಯತಿ ಗಂಭೀರನು
ವಿತತಯಶನು ಸ–
ನ್ಮತಿ ದಶರಥನು ೫

ಕ್ಷಿತಿಪತಿಗಿರುವರು
ಸತಿಯರು ಮೂವರು
ಪತಿಹಿತರತೆಯರು
ಸುತರೂಪೆಯರು ೬

ಹಿರಿಯಳು ಕೋಶಲ–
ದರಸನ ಮಗಳು
ಸುರುಚಿರಗುಣಪೈ–
ಸಿರಿ ಕೌಸಲ್ಯೆ ೭

ಶ್ರೀಮತಿ ಧೃತಿಮತಿ
ಕೋಮಲೆ ಕಿರಿಯಳು
ಪ್ರೇಮದ ಮೂರ್ತಿ ಸು–
ಭಾಸೆ ಸುಮಿತ್ರೆ ೮

## ಪ್ರಥಮಾಧ್ಯಾಯವು

ಪೊಡವಿಪತಿಯು ಬಲು-
ಬೆಡಗಿನ ಕೈಗ-
ನ್ನಡಿಯೆನೆ ಕೇಕಯಿ
ನಡುವಿನ ಮಡದಿ ೯

ಸಂತತಿಯಾಭೂ-
ಕಾಂತನಿಗಿಲ್ಲವು,
ಚಿಂತೆಯುಲಿರುವನು
ಸಂತತವವನು ೧೦

ದನಿಗಿಂಪಿರಬೇ-
ಕಿನಿಗಂಪಲರಿಗೆ
ತನಯರು ಬೇಕೈ
ಮನೆಯೆಂಬುದಕೆ ೧೧

ಒಂದು ದಿವಸವೈ-
ತಂದನು ಬೇಟೆಗೆ
ಮಂದಿಯೊಡನೆ ನೃಪ-
ನೊಂದು ವಿಪಿನಕೆ ೧೨

ಕ್ಷಿತಿಯುಲ ವಿಧಿವಿಲ-
ಸಿತವೈಚಿತ್ರ್ಯದ
ಗತಿಯನರಿತ ಮತಿ-
ಯುತರಿಹರಾರು ? ೧೩

ಸಸಿಪದ ಕೊಳದಲಿ
ಮುನಿಸುತನಯನು ನೀ-
ರನು ತುಂಬುತಲಿರೆ
ದನಿ ಕೇಳಿಸಿತು ೧೪

ನರಪತಿ ಮೃಗಯೆಂ-
ದರಿಯಲು ಬಿಲ್ಲಿಗೆ
ಸರಳನು ಹೂಡಿದ-
ನರಕೇ ದೈವಾ ! ೧೫

ಬಿಟ್ಟೊಡೆ ಬಾಣವು
ಮುಟ್ಟೆಯೊಡೆಯೆಗೋ-
ಳಿಟ್ಟನು ಕುವರನು
ಚಿಟ್ಟನೆ ಚೀರಿ ೧೬

“ ಹತನಾದೆನು ಶರ-
ಹತಿಗೆಲೆ ಘಾತಕಿ,
ಗತಿಯಿನ್ನಾರೈ
ಪಿತೃಗಳಿಗಕಟಾ ? ೧೭

“ ಕುರುಡರು ನೀರಡ-
ಸಿರುವರು, ನೀರನು
ತರಲೆಂದಿಲ್ಲಿಗೆ
ಬರಲೀಡೆಸೆಯೋ ? ” ೧೮

ಸೀಳಿತು ಕೂಗು ಸ್ವ-
ಪಾಳಕನೆದೆಯನು!
ಬಾಳಿಗೆ ಮುಳುವಲಿ
ಗೋಳಿನ ಕೂಗು! ೧೯

ಒದಪಿದುದುರಿ ಸ್ವಪ-
ನದಿಯಲಿ! ಹಾ! ಹಾ!
ಕುದಿದನು ಮನದಲಿ
ಕುದಿ ಕುಪಿದನಲಾ! ೨೦

ಅಪ್ಪನು ಶೋಕದೊ-
ಳಿಪ್ಪನು ಮುನಿಸುತ-
ನಿಪ್ಪ ಹೆಗ್ಗದುತ್ತೆ
ಒಪ್ಪನತಿಯಲಿ ೨೧

" ಮಸುಳಿಸಿದುದು ಮತ-
ಯುಸಗದೆಸ್ವ ಪರಿ-
ಕಿಸದಪಕೃತಿಯನು!
ಪಸೆಗೆಟ್ಟನಲಾ! ೨೨

" ಬಳಿಯಲಿ ಸಾಸಿರೆ
ಘುಳುಘುಳು ಶಬ್ದವು
ಕೊಳದಿಂದೆದ್ದಿತು
ಸೆಳೆದಿತು ಮನವ ೨೩

" ಬಗೆದೆನು ಬೇಟೆಯು
ಮೃಗವೆಂದಂಬನು
ತೆಗೆದೆಚ್ಚೆನು, ಕೇ-
ಡಿಗನ್ಯೆ ನಾನು ! ೨೪

" ಅರಸರ ಸರಳಾ-
ರ್ತರ ರಕ್ಷಣಕಿರೆ,
ಹಿರಿದು ದಿಡಸುವನು
ಹಿರುಪದ್ರವಿಯಾ ! ೨೫

" ದುರದೃಷ್ಟವಿದೋ
ಕರೆತಂದೆನ್ನನು
ಸರಯುತಿದೋಷಕೆ
ಗುರಿಯಾಗಿಸಿತು ! ೨೬

" ದಶರಥಸಿಂದಪ-
ಯಶಕಿನವಂಶವು
ಪಶವಾಯ್ತೆಂಬರು
ದಶದಿಶೆಗಳಲಿ ! ೨೭

" ಪತಿತನು ನಾನೀ-
ಕೃತಿಗೆಲ್ಲಿಯು ನಿ-
ಷ್ಕೃತಿಯನು ಕಾಣೆನು !
ಹತಭಾಗ್ಯನಲಾ ! ೨೮

" ಒಡೆದು ಸರಳು ನಿ-
ನ್ನೊಡಲೊಳಗುಳಿದು,
ಸುಡುವುದು ನೋಡೆ-
ನ್ನೊಡಲನು, ಕುವರಾ! " ೨೯

ಧರಣೀಪತಿಯೊಡ-
ಲುರಿ ಮಸಗಲು, ಸಂ-
ಹರಿಸಲಿಕಾರದೆ
ಧರೆಗುರುಳಿದನು ! ೩೦

ಮುನಿಬಾಲಕನಾ-
ಜನಪತಿಯೆದೆಯುರಿ-
ಯನು ಕಂಡನು, ನೊಂ-
ದನು, ಮಿಡುಕಿದನು ೩೧

ಮರುಕದೆ ನೃಪತಿಯ
ಕರವನು ಹಿಡಿದನು,
ಮರುಗದಿರೆಂದನು
ಸರಲಹೃದಯನು ೩೨

" ಅರಿಯದೆ ಬಿಲ್ಲಿಗೆ
ಸರಳನು ಹೂಡಿದೆ,
ಧರಣೀಪತಿ, ತ-
ಪ್ಪಿರುವುದದೆಲ್ಲಿ ? ೩೩

" ಅತಿವೃದ್ಧರಲೇ
ಪಿತೃದೇವತೆಗಳು !
ಗತಿಯುವರಿಗೆ, ಭೂ-
ಪತಿ, ನೀನಿನ್ನು ೩೪

" ತಡೆಯದಲಿನ್ನೊ-
ಯ್ಯುತು ನೀನೆನ್ನನು
ಪಡೆದವರಿದಿರಲಿ,
ನಡುಗಲು ಜೀವಾ ೩೫

" ಎಲೆ ಬಡನುಯ್ಯುದು
ಜಲಪಾತ್ರವನು
ಹಲುಬುತಲಿರುವರು
ಬಲು ನೀರಡಿಸಿ ! " ೩೬

ಮುನಿತನಯನು ನುಡಿ-
ಯನು ಮುಂದೇನನು,
ಜನನೀಜನಕರ
ನೆನೆಯುತಲಿಹನು ೩೭

ಮರೆವಾತನನಾ-
ವರಿಸಿತು, ಶ್ರೀಜವ
ಮರೆಯಾಪ್ತನನಾ-
ಅರೆಗಣ್ಣೊಂಪೆ ! ೩೮

ಕುಸಿಬಿದ್ದುದು ಗೋ-
ಣನು ಹಿಡಿದನು ಸೂ-
ಜನಲಾಕುವರನಿ-
ಗುಸಿರೊಂದುಳಿಯೆ ! ೩೯

ಜನನಾಥನು ಕಂ-
ಬನಿಗರೆಯುತಲಾ-
ತನ ಬಾಯೊಳು ನೀ-
ರನು ಹನಿಸಿದನು ೪೦

ಕೊಡವನು ತುಂಬಿದ-
ನೊಡನವನೀಶನು
ಹುಡುಗನೊಡನೆ ಮುನಿ-
ಯೆಡೆಗೆ ನಡೆದನು ೪೧

ನರಪತಿಯೈತರು-
ತಿರಲತ್ತಲು ವೃ-
ದ್ಧರು ಕೊರಗುತಲಿರು-
ವರು ಚಿಂತೆಯಲಿ ೪೨

“ ನೀರಿಗೆ ಹೋದನು
ಬಾರನದೇಕೋ ?
ನೀರಿನ ತಾಣವು
ದೂರದಲಿಲ್ಲಾ. ೪೩

"ಇಳಿದನೊ ಮಡುವಿನೊ-
ಳಿಳಿದುದೊ ಜಲಚರ
ತುಳಿದುದೊ ಮದಗಜ-
ವೆಳಗುವರಸನು ? ೪೪

"ಅಡವಿಯ ಮೃಗವೇ-
ನೊಡಲೊಳಗಿಟ್ಟುದೊ ?
ಸಿಡುಕಿನ ಹಾವನು
ತುಡುಕಿದನೇನೋ ? ೪೫

"ಚತುರನವನು ಶುಭ-
ಮತಿ ಗಂಭೀರನು
ಅತಿಕಾರುಣಿಕನು
ಪಿತೃವತ್ಸಲನು ! ೪೬

"ಭುಗಿಭುಗಿಲೆನುತುರಿ
ಬಗೆಯನು ಸುಡುವುದು !
ಅಗಲಿದನೆಮ್ಮನು
ಮಗನಕಟಕಟಾ !" ೪೭

ಬಿಸುಸುಯ್ದುತ್ತ್ರರು
ಒಸವಳಿದಾತಾ-
ಪಸದಂಪತಿ ತ-
ಮ್ಮಸಹಾಯತೆಗೆ ೪೮

ಜನಪನು ಮುನಿಸುತ-
ನನು ಕೊಂಡೈತಂ-
ದನು ಮುನಿಯೆಡೆಗಾ-
ತನನಿಳುಹಿದನು ೪೯

" ವಿಶ್ವಸ್ತಾತ್ಮನು ನಾ-
ನಕಟಕಟಾ ಪಾ-
ತಕಿಯ್ಯೆ ನರಘಾ-
ತಕನಾಗಿಹೆನು ! ೫೦

" ಕೊಂಡೆನು ನಿಮ್ಮಯ
ನಂದನನನು ನಾ-
ನೆಂದೆ " ನುತರುಹಿದ-
ನಂದಾದುದನು ೫೧

ಉರುಳಿದರಾವೃ-
ದ್ಧರು ಕಂಗೆಟ್ಟಿಳೆ-
ಗುರುಳಿಸದಾರನು
ಮರಣವು ಸುತನಾ? ೫೨

ಉರಿಯನು ಸೈರಿಸ-
ಲರಿಯದೆ ತಾಪಸ-
ರುರಿಯುತೆ ನೃಪಗಿ-
ತ್ತರು ಶಾಪವನು ೫೩

"ಅತಿದಾರುಣವೈ
ಸುತರ ವಿಯೋಗವು!
ಸುತರ ವಿಯೋಗವೆ
ಮೃತಿಗೋಚರಗಾಗು!" ೫೪

ಅವನೀಶನ ದೈ-
ವವೆ ದೈವವು! ಶಾ-
ಪವು ವರರೂಪದ-
ಲವತರಿಸಿತಲಾ! ೫೫

ತನುವನು ತೊರೆದರು
ಮುನಿದಂಪತಿಗಳು
ಜನಪನು ಚಿತೆಮೂ-
ರನು ರಚಿಸಿದನು ೫೬

ಆ ಮುನಿವರ ದಹ-
ನಾದಿಕ್ರಿಯೆಗಳು
ಆದಶರಥನಿಂ-
ದಾದರದಿಂದೆ ೫೭

ವನದೊಳಗೊದಗಿದು-
ದನು ಸೋಜಿಗದಲಿ
ನೆನೆಯುತೆ ಬಂದನು
ಜನಪತಿ ಪುರಕೆ ೫೮

ಇದು ಪ್ರಥಮಾಧ್ಯಾಯವು.

ಶ್ರೀಃ

## ದ್ವಿತೀಯಾಧ್ಯಾಯವು

ಶ್ರೀರಘುಕುಲಮಣಿ
ವೀರಶಿರೋಮಣಿ
ಕಾರುಣಿಕಾಗ್ರಣಿ
ತಾರಕ ಶರಣು ೧

ನರಪತಿ ಬಂದನು,
ಶಿರದಲಿ ತಳೆದನು
ಗುರುಜನರಡಿದಾ-
ವರೆಯ ಮುಡಿಯನು ೨

ಧರಣೀಶನು ಕುಲ-
ಗುರುಗೆ ವಸಿಷ್ಠರಿ-
ಗರುಹಿದನು ಸವಿ-
ಸ್ತರ ವೃತ್ತವನು ೩

ನಿಡುಸುಯ್ಗರೆದನು,
ನುಡಿದನು ಕಂಬನಿ-
ಮಿಡಿಯುತೆ ನರಪತಿ
ಕಡುದುಗುಡದಲಿ ೪

" ಸುತರಿರದೀ ಜೀ-
ವಿತದಪಹಾಸ್ಯವು
' ಸುತನ ವಿಯೋಗದೆ
ಮೃತಿ 'ಯೆಂಬ ನುಡಿ! " ೫

ಇಂತೆಂದನು ಭೂ-
ಕಾಂತನು, ಮುನಿಪತಿ-
ಯಿಂತೆಂದವನನು
ಸಂತೈಸಿದನು ೬

" ಮುನಿ ನುಡಿದುದು ಸು-
ಳ್ಳೆನಲಾಗದು, ನೃಪ,
ನಿನಗದು ವರವೈ,
ತನಯರ ಪಡೆವೆ! ೭

" ಸುವಿಹಿತಯಜ್ಞದೆ
ದಿವಿಜೋತ್ತಮರನು,
ಅವನೀಪತಿ, ಯಜಿ-
ಸುವುದೈ ನೀನು ೮

" ನೆರೆಯಿಸು ವಿದ್ವ-
ದ್ವರರನು ದೇಶಾಂ-
ತರದೆ ಕಲಾಕುಶ-
ಲರನು ಕರೆಯಿಸು ೯

ನೆರೆವ ಜನಕೆ ತೆರ-
ತೆರದ ಸುವಿಧೆಗಳ
ವಿರಚಿಸು ಸಮಲಂ-
ಕರಿಸು ಪುರವನು ೧೦

"ಗುರುಗಳ ಹಿರಿಯರ
ಹರಕೆಯು ಬಲದಲಿ,
ನರಪತಿ, ಯಜ್ಞವು
ನೆರವೇರುವುದು ೧೧

"ಶಾಂತಿಯು ತಳೆದು ನಿ-
ತಾಂತಕ್ಷಮಿಯಾ-
ಗಂತಃಕರಣದ
ಚಿಂತೆಯು ನೀಗು ೧೨

"ಯಮನಿಯಮಾದಿ-
ಕ್ರಮವನು ಕೈಕೊ-
ಳ್ಳಮರರನೊಲಿಸಲು
ಸುಮುಹೂರ್ತವಿದು." ೧೩

ಎಂದೊಡೆ ಗುರುವಿಗೆ
ವಂದಿಸಿ ದಶರಥ-
ನೆಂದನು, "ಕೃತಿ ನಿ-
ನ್ನಿಂದಲೆ ನಾನು! ೧೪

" ಸುವಿಮಲಯಶ ಗುರು,
ರವಿವಂಶದ ನೃ-
ಪನಕಿರುತಿಯ ನೀ-
ನವಲಂಬನವು ೧೫

" ಮುನಿಗಳರಸನೆ,
ನಾನಾದರದಲಿ
ಆನುವೆ ತಲೆಯೊಳು
ನೀನೆಂದುದನು " ೧೬

ಶುಚಿಮಾನಸನರಾ-
ವಚನವನಾಲಿಸಿ
ಉಚಿತವಿದೆಂದರು
ಸಚಿವೋತ್ತಮರು ೧೭

ಇದೊ ಸಿರ್ಮಿತವಾ-
ದುದು ವಿಸ್ತೃತವಾ-
ದುದು ನೋಡಿದು ಯ-
ಜ್ಞದ ಮಂಟಪವು ೧೮

ನೆರೆದರಯೋಧ್ಯಾ-
ಪುರದಲಿ ದೇಶಾಂ-
ತರದಿಂದೈದಿದ
ನರಪುಂಗವರು ೧೯

ಬಂದುದು ವಿಪ್ರರ
ವೃಂದವು ರಾಜರ
ವೃಂದವು ವೈಶ್ಯರ
ವೃಂದವು ನೆರೆದು ೨೦

ಸಿಂಗರದಬಲೆಯು-
ರಂಗದ ಸೊಂಪು
ಮಂಗಳಮತಿಗಳ
ಸಂಗದಲಂಪು ೨೧

ಮೊಳಗುವ ವಾದ್ಯದ
ಮಿಳಿರುವ ಕೇತುವ
ಕಳಸಿಸದವು ಜಾ-
ನೊಳು ತುಂಬಿಹುವು ೨೨

ಹೊಳೆವಾಕನ್ನಡಿ-
ಗಳ ಬೆಳಕೆನಿತೋ!
ತಳಿರಿನ ತೋರಣ-
ಗಳ ಸೊಂಪೆನಿತೋ! ೨೩

ತೊಳಗುವ ಹೊನ್ನಿನ
ಕಳಶಗಳೆನಿತೋ!
ಹೊಳೆಹೊಳೆವಾರತಿ-
ಗಳ ಸೊಗಸೆನಿತೋ! ೨೪

ವೇದಧ್ವನಿ ವಾ-
ಗ್ವಾದಧ್ವನಿ ಸಂ-
ವೋದಧ್ವನಿಯಾ-
ಮೋದಿಸಿಯಲ್ಲಿ ೨೫

ಒಲಿದವು ಸುವಿದೆಗೆ
ಸಲಿದು ಜನರು ನೃಪ-
ತಿಲಕನ ಘನತೆಗೆ
ತಲೆದೂಗಿದರು ೨೬

ಸವನಾಹುತಿಗಂ-
ಧವು ಮಂತ್ರನಿನಾ-
ದವು ಸಂತೋಷಿಸಿ-
ದುವು ದಿವಿಜರನು ೨೭

ಜನನಾಥನಿಗೊಲಿ-
ದನು ಯಜ್ಞದ ದೇ-
ವನು, ಕಾಣಿಸಿಕೊಂ-
ಡನು ಕೊಂಡದಲಿ ೨೮

ದೆಸೆದೆಸೆಯೊಳು ರಾ-
ಜಿಸುತಿರೆ ತೇಜಃ-
ಪ್ರಸರವು, ರಾಜನಿ-
ಗೊಸೆದು ನುಡಿದನು ೨೯

" ವಸುಧೇಂದ್ರನೆ, ಪಾ-
ಯಸವಿದೆ ಕೊಳ್, ಪ್ರೇ-
ಯಸಿಯರಿಗುಣಿಸಿದ-
ನೊಸೆದು, ಸುತಾರ್ಥೀ " ೩೦

ಎನುತಿತ್ತನು ದೇ-
ವನು ಪಾಯಸವನು
ಜನಪತಿ ಕೈಕೊಂ-
ಡನು ಭಕ್ತಿಯಲಿ ೩೧

ನೆರೆದವರೆಲ್ಲರು
ಪರಿತೋಷದೆ ಮೆ-
ಯ್ಮರೆತರು ಕುಣಿಕುಣಿ-
ದರು ನಲಿನಲಿದು ೩೨

ನರನಾಥನ ಮೂ-
ವರು ಸತಿಯರು ಮೆ-
ಲ್ಲರು ಪಾಯಸವನು
ಪರಮಾದರದೆ ೩೩

ನಿಂತುದು ಗರ್ಭವು
ಕಾಂತೆಯರಿಗೆ, ಭೂ-
ಕಾಂತನ ಹೃದಯದ
ಸಂತಸವೆನಿತೋ ! ೩೪

ಕಳೆದುದು ಕಾಲವು,
ಬಳೆದುದು ಗರ್ಭವು,
ಹೊಳೆದುದು ಮೆಯ್ಯಾ-
ನಳಿನಾಕ್ಷಿಯುರಾ ೩೫

ಸಂದುದು ಕಾಲವು,
ಚೆಂದದ ಚೈತ್ರವು
ಬಂದುದು, ಧರೆಯಾ-
ನಂದವದೆನಿತೋ ! ೩೬

ಚೆಂದಳಿರುಗಳಿಂ-
ದಂದವನಾಂತೆನಿ-
ತೊಂದು ಮಹೀರುಹ-
ವೃಂದವೆಸೆವುದೋ ! ೩೭

ಪರಿವೆಳಗಾಳಿಗೆ
ಸರುಗಂಪೆನಿತೋ
ಪರಿಮಳದಿಂದಪೆ-
ವಿರಿದಲರುಗಳಾ ! ೩೮

ಮರಿದುಂಬಿಯು ಕಳ-
ವಿರುತಿಗಳಿಂಪು,
ಪರಭೃತಿಕೆಗಳಿಂ-
ಚರಗಳ ಸೊಂಪು ೩೯

ನವವತ್ಸರದಾ-
ನವಮಾಸದ ನವ-
ನವಮಿಯ ತಿಥಿಯು-
ತ್ಸವಮಯವಾಯ್ತು ೪೦

ವನಜಾಸ್ಯೆಗೆ ರಾ-
ಮನು ಕೌಸಲ್ಯೆಗೆ
ಜನಿಸಿದನದಿತಿಗೆ
ದಿನಮಣಿಯವೊಲು ೪೧

ನಯನಾನಂದನು
ನಯಸಂಪನ್ನನು
ಜಯಶೀಲನು ಕೇ-
ಕಯಿಗೆ ಭರತನು ೪೨

ಅಣುಗರು ಲಲನಾ-
ಮಣಿಗೆ ಸುಮಿತ್ರೆಗೆ
ರಣವೀರರು ಲ-
ಕ್ಷ್ಮಣ ಶತ್ರುಹರು ೪೩

ಮೊಳಗಿದುವಾಗಸ-
ದೊಳು ಸುರದುಂದುಭಿ-
ಗಳು, ಕುಣಿದರು ಸುರ-
ಲಲನೆಯರಲ್ಲಿ ೪೪

ಅನಪತ್ಯನು ಭೂ-
ಪನು ಪುಳಕಾಂಚಿತ-
ತನುವಾದನು ಸುತ-
ಜನನೋತ್ಸವದೆ ೪೫

ತಣಿಸಿದನಾನೃಪ-
ಮಣಿ ಜನರನು ಬಹು-
ಮಣಿಕನಕವಿಭೂ-
ಷಣಗಳನಿತ್ತು ೪೬

ಬಳೆದರು ವಿದ್ಯಾ-
ನಿಲಯರು ಸದ್ಗುಣಿ-
ಗಳ ನೆಲೆಯಾಗಿಸ-
ಕುಲಭೂಷಣರು ೪೭

ಪಿತೃಶುಶ್ರೂಷಾ-
ರತಿಗಳು ತೇಜೋ-
ನ್ವಿತರು ಮಹಾಬಳ-
ರತಿಸುಂದರರು ೪೮

ಸಾದಸರನು ನಲ-
ವಿಂದೀಕ್ಷಿಸುತಾ-
ನಂದದೊಳಿರುತಿಹ-
ನೊಂವಿ ನರಪತಿ ೪೯

ಇದು ದ್ವಿತೀಯಾಧ್ಯಾಯವು.

ಶ್ರೀಃ

## ತೃತೀಯಾಧ್ಯಾಯವು

ಶ್ರೀರಘುಕುಲಮಣಿ
ವೀರಶಿರೋಮಣಿ
ಕಾರುಣಿಕಾಗ್ರಣಿ
ತಾರಕ ಶರಣು ೧

ಬಂದನು ಕೌಶಿಕ–
ನೊಂದುದಿವಸ ಮುನಿ–
ವಂದಿತಚರಣ-
ದ್ವಂದ್ವತಪಸ್ವಿ ೨

ರಾಜಭವನಕಾ–
ತೇಜೋನಿಧಿ ಬರೆ,
ಪೂಜಿಸಿ ನುಡಿದನು
ರಾಜನು ಸಯದೆ ೩

"ಕೃತಿ ಸಾನ್ಸೈ, ಮುನಿ–
ಪತಿ, ಜನ್ಮಾಂತರ–
ಕೃತಪುಣ್ಯವು ಫಲಿ–
ಸಿತು ನನಗಿಂದು ! ೪

“ವಿಮಲಾತ್ಮರ ಸಂ-
ಗಮವು, ತಪೋನಿಧಿ,
ಸುಮಹತ್ಪುಣ್ಯದೆ
ಸಮನಿಪುದಲ್ತೇ? ೫

“ಗಾಧಿಯ ತನಯನೆ,
ಸಾಧುಗಳೆಂಬರು
ಈ ಧರಣಿಯ ಸಂ-
ಶೋಧಕರಹರು ೬

“ಒಸಗೆಯೆನಗೆ ನೀ-
ವೊಸೆದೈತಂದುದು
ಬೆಸಸಿರಿ ಬರಲು-
ದ್ದೇಶವೇನೆಂದು ೭

“ಮುನಿ, ಕಾರ್ಯವದೇ-
ನನುರಾಗದಲುಸಿ-
ರನುಮಾನಿಸದದ-
ನನುಗೊಳಿಸುವೆನು” ೮

ಎಂದೊಡೆ ಕೌಶಿಕ-
ನೆಂದನು, “ನೃಪ, ನೀ-
ನೆಂದುದು ನನಗಾ-
ನಂದಾವಹವು ೯

" ಮನುಜವರಾ, ರಘು–
ವಿನ ಕುಲದರಸನಿ–
ಗಸುಗುಣವಹ ಮಾ–
ತನೆ ನೀನೆಂದೈ ೧೦

" ಇರುವರು ಮುನಿವ–
ರ್ಯರು ಸತ್ವಾಂಬುಧಿ
ಗುರು ನಿನಗೆ ವಸಿ–
ಷ್ಠರು, ಕಾಕುತ್ಸ್ಥ ೧೧

" ಫಲಿಸಿತು, ನೃಪಕುಲ–
ತಿಲಕನೆ, ಗುರು ನಿನ–
ಗೊಲಿದಿತ್ತಿಹ ನಿ–
ರ್ಮಲ ವಿದ್ಯೆಯದು ೧೨

" ಬಂದಿರುವೆನು ನಾ–
ನಿಂದಿಲ್ಲಿಗದೇ–
ಕೆಂದೊಡೆ, ಜನತಾ–
ನಂದನೆ, ಕೇಳು ೧೩

" ಅರರೇ ! ಧರ್ಮಾ–
ಚರಣಕ್ಕೊದವಿಹು–
ದರಸನೆ ವಿಘ್ನವು,
ಪರಿಹರಿಸದನು ೧೪

" ನೀಚರಹಾವಮಾ–
ರೀಚಸುಬಾಹುಗ–
ಳಾಚರಿಸುವರಸ–
ವಿಮಾಚೀಸವನು ! ೧೫

" ದನುಜರು ಸಾಯಂ–
ತನಸವನದಲನು–
ದಿನವೂ ಕೆನ್ನೀ–
ರನು ಸುರಿವರಲಾ ! ೧೬

" ಎಡರೊಡಗಿಸಿ ಹಾಳ್–
ಗೆಡಹುತೆ ಮುಖವನು
ಕಡುದುಗುಡವನೆಸ–
ಗೊಡರಿಸುತಿಹರು ೧೭

" ಉರಿವೆನೆ ಶಾಪದೆ
ದುರುಳರನೆಂದೊಡೆ,
ಇರುವೆನು ನಾನ–
ಧ್ವರದೀಕ್ಷಿತನು ೧೮

" ಕಾಯುವುದೈ ನೀ–
ನೀಯಜ್ಞವನು,
ಮಾಯಿಸು ನೋವನು,
ರಾಯನೆ, ಮುನದಾ ! ೧೯

" ಅಸಮಬಲರು ರಾ-
ಕ್ಷಸರು ಮಹಾಸಾ-
ಹಸಿಗಳವರು ತಾ-
ಪಸವೈರಿಗಳು ೨೦

" ಏಾರಿಹರೆಲ್ಲರ-
ಸೀರಾಕ್ಷಸರು;
ಶ್ರೀರಾಮನೆ ಸಂ-
ಹಾರಕನಹನು ೨೧

" ಧೀಮಂತನು ನಿ-
ಸ್ಸೀಮಬಲಾಢ್ಯನು
ರಾಮನು ಲೋಕ-
ಕ್ಷೇಮಾವಹನು ೨೨

" ಇವನಿಗಸಾಧ್ಯವು
ಭುವನದೊಳಾವುದು,
ಅವನೀಪತಿ, ಇರ-
ದಿವನನುಪಮನು ೨೩

" ಖಲರನು ಸಂಹರಿ-
ಸಲಿ, ಭುವನತ್ರಯ-
ದಲಿ ಯಶವನು ಪಡೆ
ಯಲಿ ದಾಶರಥಿ ೨೪

" ಹೆದರದಿರಾತನಿ–
ಗೊದಗದಪಾಯವು,
ಸದೆವನವನು ವಿ–
ಶ್ವದ ಕುತ್ತವನು ೨೫

" ಶುಭವಹುದೀತನಿ–
ಗಭಯವು ಸತತವು,
ಪ್ರಭು, ನಿನಗೆನ್ನ ದಿ–
ದಭಿವಚನವಲಾ ! ೨೬

" ಒಪ್ಪಿಸು ಕುಲಗುರು–
ವೊಪ್ಪಿದರವನನು,
ತಪ್ಪರು ರಾಘವ–
ರೊಪ್ಪಿದ ನುಡಿಗೆ " ೨೭

ಮುನಿ ನುಡಿದಪ್ರಿಯ–
ವನು ಕೇಳುತಲಾ–
ಜನಪನು ಬಸವಳಿ–
ದನು ಮೆಯ್ಮರೆ ೨೮

ನೊಂದನು ಮನದೊಳು,
ಸಂದನು ಮೂರ್ಛೆಗೆ,
ಬಂದಿತಿದೇನೆನ–
ಗೆಂದುಮ್ಮಳಿಸಿ ೨೯

ಬರಲೆಚ್ಚರು, ಮೆ–
ಯ್ಮರುಗುತೆ ಕಂಬನಿ–
ಗರೆಯುತೆ ನುಡಿದನು
ನರಪತಿಯಿಂತು ೩೦

"ಎನಿತಾದರು ಧನ–
ಕನಕವನೀವೆನು,
ಮುನಿವರ, ಕೊಡುವೆನು
ತನುಜನನೆಂತು? ೩೧

"ಎನಗಾದರು ಮು–
ಪ್ಪಿನೊಳೀಮಕ್ಕಳು;
ಮನವೆಂತಹುದವ–
ರನು ಬಿಟ್ಟಿರಲು? ೩೨

"ಎಳೆಯನು ರಾಮನು,
ಖಳರತಿಬಳರಾ–
ಖಳರೊಡನಿವನಿಗೆ
ಕೊಳಗುಳವೆಂತು? ೩೩

"ವೀರರು ಯುದ್ಧವಿ–
ಶಾರದರದಯರು
ಕ್ರೂರರು ದುರ್ಮದ–
ರಾರಾಕ್ಷಸರು ೩೪

"ಗೆಲುವನೆ ಸಂಗರ-
ದಲಿ ಸುಕುಮಾರನು
ಕೊಲರೇ ಸಸುರರು
ಲಲಿತಾಂಗನನು ? ೩೫

"ಬರುವೆನು ನಾನಸು-
ರರನಿದಿರಿಸುವೆನು,
ಇರಿದವರನು ಸಂ-
ಹರಿಸುವೆನು, ಮುನೀ ೩೬

"ಕ್ರತುನಾಶಕರಪ-
ಕೃತಿಯನು ತಡೆವೆನು;
ಸುತನುಳಿಯಲಿ, ಮುನಿ-
ಪತಿ, ಕರುಣಿಪುದು ! " ೩೭

ಜನನಾಥನ ನುಡಿ-
ಯನು ಮುನಿಯಾಲಿಸಿ-
ದನು ಮರುನುಡಿದನು
ಮುನಿದಾತನಿಗೆ ೩೮

"ಅಣ್ಣನೆ, ನುಡಿದೈ
ಬಣ್ಣದ ಮಾತನು,
ಕಣ್ಣೊಳಗೆರಚಿದೆ
ಮಣ್ಣನು ನೀನು ! ೩೯

"ಏನನೊ ಬೇಡಿದೆ-
ನೇನನೊ ನೀಡುವೆ!
ಮಾನದ ಬೆಲೆ ಗುಣ-
ಹೀನನಿಗೆಲ್ಲಿ? ೪೦

"ಆರಿದ ಬಾಯಿಗೆ
ನೀರುಪಯೋಗವು;
ಕೋರನು ಮನುಜನು
ಬೇರಾವುದನು ೪೧

"ನೃಪ, ನೀನೆನಗಿದೆ
ವಿಪರೀತವನು,
ಕೃಪಣಾತ್ಮನೆ, ಗುರಿ-
ಯುಪಯುಶಕಾದ್ಯೈ! ೪೨

"ಅರಸನೆ ನುಡಿದುದ
ತಿರುಗಿಸಿದವರಿಗೆ
ನರಕವೆ ಗತಿಯೆಂ-
ದರಿಯದಿರುವೆಯಾ? ೪೩

"ಎಲೆಲಾ ನೃಪ! ನಿ
ಷ್ಫಲವಚನನೆ, ರಘು-
ಕುಲವನು ಕೆಡಿಸಿದೆ,
ಕಲುಷಿತಮತಿಯೇ! ೪೪

“ ಶೂಲಿಯು ನೆನೆಯುತೆ
ಮೂಲೆಯಲಿರುವೆನು
ಕಾಲವು ನನಗನು–
ಕೂಲಿಸುವನಕ ! ೪೫

“ ಅನೃತಾತ್ಮನ ಮುಖ–
ವನು ನೋಡುವುದೆನ–
ಗನುಚಿತವೈ ! ಜನ–
ಪನೆ, ತೆರಳುವೆನು. ” ೪೬

ನುಡಿದಿಂತಾಮುನಿ
ನಡೆದೊಡನವನನು
ತಡೆದು ವಸಿಷ್ಠನು
ನುಡಿದನು ನೃಪಗೆ ೪೭

“ ಎಂತಾಯ್ತೈ ಮತಿ–
ಯಿಂತು ನಿನಗೆ, ಭೂ–
ಕಾಂತನೆ, ನುಡಿವುದೆ
ಸಂತರಿಗಿಂತು ? ೪೮

“ ಸದೃಶವೆ ಸುತವೋ–
ಹದೆ ನಿನಗೆದೆಗಿಡು–
ವುದು, ನುಡಿದುದನಿಂ–
ತೊದೆದಿಕ್ಕುವುದು ? ೪೯

“ ಎಲೆ ಎಲೆ ಮರೆವುದೆ
ಕುಲದಾಚಾರವ–
ನೊಲಿವರೆ ದೇವರು
ಕುಲಘಾತಕಗೆ ? ೫೦

“ ಮುನಿಕೌಶಿಕನೀ–
ತನಸಾಮರ್ಥ್ಯನು !
ಅನುಮಾನನೆ ತನ–
ಯುನನೀವುದಕೆ ? ೫೧

“ ದಶರಥ, ನಿಖಿಲವು
ಕುಶಿಕಾತ್ಮಜನಿಗೆ
ವಶವಿಹುದಸ್ತ್ರವು
ವಿಶದಾತ್ಮನಿಗೆ ೫೨

“ ಸುರರಸುರರು ಗೆಲ–
ಲರಿಯುರು ರಾಮನ–
ನಿರೆ ರಕ್ಷಕನೀ–
ವರಮುನಿಯುವನಾ ! ” ೫೩

ಗುರುವಚನಾಂಜನ–
ವರಸನ ಕುರುಡನು
ಹರಿಯಿತು, ನುಡಿದನು
ಹರುಷದಲವನು ೫೪

“ಸರಿದುದು ಮೋಹವು,
ಗುರು, ರಾಮನು ಮುನಿ–
ವರನೀಪ್ಸಿತವನು
ನೆರವೇರಿಸಲಿ ೫೫

“ತನಯರು ಹೋಗಲಿ
ಮುನಿಯೊಡನಧ್ವರ–
ವನು ಕಾಯಲು ರಾ–
ಮನು ಲಕ್ಷ್ಮಣನು” ೫೬

ಜನಪತಿ ನುಡಿದಿಂ–
ತನುನಯದಿಂದವ–
ರನು ಮುನಿಗೊಪ್ಪಿಸಿ–
ದನು, ಹರಸಿದನು ೫೭

ಮಂದಸ್ಮಿತದಾ–
ಸುಂದರವದನರು
ಬಂದರು ಜನನೀ–
ಮಂದಿರದಲ್ಲಿ ೫೮

ಎರಗಿದರತ್ಯಾ–
ದರದಲಿ ಜನನೀ–
ಚರಣಾಂಬುಜಕಾ–
ವರಬಾಲಕರು ೫೯

ಹರಕೆಯುಸವರಾಂ-
ತರು, ಹೊರಟರು ಮುಂ-
ದಿರದಿಂದೈತಂ-
ದರು ರಿಸಿಯೆಡೆಗೆ ೬೦

ಸುಕುಮಾರಾಂಗರು
ಸುಕೃತಿಗಳಾಕೌ-
ಶಿಕನೊಡನೈದಿದ-
ರಕುತೋಭಯರು ೬೧

ಇದು ತೃತೀಯಾಧ್ಯಾಯವು.

ಶ್ರೀಃ

## ಚತುರ್ಥಾಧ್ಯಾಯವು

ಶ್ರೀರಘುಕುಲಮಣಿ
ವೀರಶಿರೋಮಣಿ
ಕಾರುಣಿಕಾಗ್ರಣಿ
ತಾರಕ ಶರಣು ೧

ಸರಲಾತ್ಮರು ಭಾ-
ಸುರತೇಜರು ಮೂ-
ವರು ನಡೆತಂದರು
ಸರಯೂನದಿಗೆ ೨

ಮುನಿಪನು ವಿದ್ಯೆಗ-
ಳನು ರಾಘವರಿಗೆ
ಅನುನಯದಿಂದಿ-
ತ್ತನು ತೀರದಲಿ ೩

ಬಲವಾದುದು ನಿ-
ಸ್ತುಲವಾವಿದ್ಯೆಯು
ಬಲದಿಂದಾರಘು-
ಕುಲಪುಂಗವರಾ ೪

ಹಸಿವವರನು ಹಲು-
ಬಿಸದೈ, ತೃಷೆ ಪೀ-
ಡಿಸದವರನು ಬಳ-
ಲಿಸದೈ ದಣುವು ೫

ಕಳೆದಲ್ಲಿರುಳನು
ಬೆಳಗಾದೊಡನೆಯೆ
ಹೊಳೆಯನು ದಾಟಿದ-
ರೆಳವೆಳಕಿನೊಳು ೬

ಸಡೆದರು, ಮುಂದೊಂ-
ದಡವಿಗೆ ಬಂದರು,
ಗುಡುಗನು ಕೇಳಿದ-
ರೊಡನವರಲ್ಲಿ ೭

ಅಡವಿಯನೇ ಅದು
ಸಡುಸಡುಗಿಸಿದುದು !
ಗಿಡುಮರಗಳು ಬೇ-
ರೊಡನುರುಳಿದುವು ! ೮

"ವನವಿದು ಘೋರವು,
ದನಿಯಿದಪೂರ್ವವು,
ಮುನಿ, ಕತೆಯೇನೆಂ"-
ದನು ದಾಶರಥಿ ೯

"ವಿಕಟಾಕೃತಿ ತಾ-
ಟಕೆ ಯಕ್ಷಿಣಿ ವಿಪಿ-
ನಕೆ ಭೀತ್ಯುತ್ಪಾ-
ದಿಕೆಯಾಗಿಹಳು ೧೦

"ಇವಳಿಹಳು ಸುಕೇ-
ತುವ ಸುತೆ, ಸುಂದನಿ-
ಗಿವಳಾದಳು, ರಾ-
ಘವ, ಅರ್ಧಾಂಗಿ ೧೧

"ತನಯನು ಮಾರೀ-
ಚನು ದುರ್ಧರ್ಷನು
ಅನುಚಿತಕೃತಿಯೀ-
ತನು ಕುಟಿಲಮತಿ ೧೨

"ಮನೆಮಾಡಿದಳೀ-
ವನದಲಿ ತಾಟಕೆ,
ದಿನದಿನವೂ ಜನ
ರನು ಹಿಂಸಿಪಳು ೧೩

"ತಾಪವನೀವೀ-
ಪಾಪೆಗಗಸ್ತ್ಯನ
ಶಾಪದೆ ರಕ್ಕಸ-
ರೂಪೊದವಿದುದು ೧೪

“ ಪುರುಷಾದಿ ಮಹಾ–
ಪರುಷಾಶಯೆ ದು–
ರ್ಧರೆಯಿವಳಸು ಸಂ–
ಹರಿಸಲು ಬೇಕು ” ೧೫

ಎನುತಿರಲಿಂತಾ–
ಮುನಿಪನು, ವಿಕೃತಾ–
ನನೆ ಬಂದಳು ನೆಲ–
ವನು ನಡುಗಿಸುತೆ ೧೬

ಕಾರುತೆ ವಿಷವನು
ಬೀರುತೆ ಸಾವನು
ಸ್ವೈರಿಣಿ ಬಂದಳು
ಮಾರಿಯು ತೆರದೆ ೧೭

ಬಿರುಸರದಿಂದಲಿ
ಕಿರಿಚುತೆ ಕೂಗುತೆ
ಮುರಿಯುತೆ ಮುಕ್ಕುತೆ
ಮೆರೆದುದು ಮೃತ್ಯು ೧೮

ಬಂದಳವಳು ನೃಪ–
ನಂದನರಿದಿರಲಿ
ನಿಂದು ನುಡಿದಳಾ–
ನಂದದಲಿಂತು ೧೯

"ಏಸು ನೇತ್ರರನೊದ-
ವಿಸಲೆನ್ನೋಟಕೆ
ಒಸೆದೈತಂದರು
ಹೊಸಮಾನಿಸರು ! ೨೦

"ಕುಡಿವೆನು ನೇತ್ರರ-
ನೊಡಲನು ಬಗೆದು !
ತಪವಿನ್ನೇಕಲೆ ?
ತಡೆಯದು ಹಸಿವು ! ೨೧

"ತಿನುವೆನು ಮೊದಲಿವ-
ರನು ಬಳಿಕವನನು !"
ಎನುತಾರಾಘವ-
ರನು ಸೆಣಸಿದಳು ೨೨

ಮುನಿ ಕಂಡದನೆಂ-
ದನು ಧರ್ಮಜ್ಞನು,
"ಅನುಮಾನಿಸದಿವ-
ಳನು ಕೊಲು, ರಾಮಾ ! ೨೩

"ಮಾರಿಹಳೆಲ್ಲರ-
ನೀರಕ್ಕಸಿ, ರಘು-
ವೀರನೆ, ಯೋಚನೆ
ಬೇರೊಂದೇಕೆ ? ೨೪

ಎಂದೊಡೆ ರಾಮನು
ವಂದಿಸಿ ಮುನಿಪದ-
ಕೊಂದಿಸಿದನು ಸರ-
ಳೊಂದನು ಧನುಗೆ ೨೫

ಎಚ್ಚನು ಸರಳನು,
ಕೊಚ್ಚಿತದವಳನು,
ನುಚ್ಚಾದಳಲೇ !
ಮೆಚ್ಚಿದನು ಮುನಿ ೨೬

“ಅಡಗಿತು ವಿಶ್ವದ
ಪಿಡುಗೆ”ನುತಾ ಮುನಿ
ಕಡುಸಂತಸವನು
ಪಡೆದನು ಸುಕೃತಿ ೨೭

ಪರಿತುಷ್ಟನು ಕುಡೆ
ವರಗಳನಾರಘು-
ವರನಿಗೆ, ಹೂಮಳೆ-
ಗರೆದರು ಸುರರು ೨೮

ಇರುಳಾವನದಲಿ
ಪರಿದುದು, ಮೂವರು
ಅರುಣೋದಯದಲಿ
ಹೊರಟರು ಮುಂದೆ ೨೯

ಚೆಲುವೆಲ್ಲಿಯುಂ! ಮು-
ಲ್ಲೆಲರಿನಿಸೋಂಕಿಗೆ
ಕುಲುಕುಲು ನಗುತಿಹು-
ಮಲರುಗಳಲ್ಲಿ ೩೦

ನಲಿದರು ಶಕುನಿಗ-
ಳೊಲವಲರಿಪ ಮಂ-
ಜುಲಕೂಜಿತದಿಂ-
ದಲಿ ರಾಘವರು ೩೧

ಬೆಳಗಾದುದು, ವನ-
ದೊಳು ತರುಲತೆಗಳು
ಪೊಳೆದುವು ಬೆಳಕಿನೊ-
ಳೆಸೇಸರಿಸಾ ೩೨

ಅರಳುವ ಹೂಗಳ
ನರುಗಂಪಿಗೆ ಬಂ-
ದೆರಗುವ ತುಂಬಿಯು
ಮೊರೆಯುಂಪೆಸಿತೋ! ೩೩

ಮುನಿಯೊಡನಾನೃಪ-
ತನಯರು ನಡೆದರು
ವನದಾಸುಭಗತೆ-
ಯನು ನೋಡುತಲಿ ೩೪

ಸರಸಾಲಾಪದೆ
ಹರುಷಿಸುತವರನು
ಮರೆಯಿಸಿದನು ಬೇ-
ಸರನು ಮುನಿಪನು ೩೫

ಅದೊ ಸಿದ್ಧಾಶ್ರಮ-
ಪದಪಿದಿರಲಿ! ಬಂ-
ದುದು ಮುನಿವೃಂದವು
ಮುದದಲಿ ಹೊರಗೆ ೩೬

ವಂದಿಸಿದರು ಮುನಿ-
ವೃಂದವನಾದರ-
ದಿಂದಾದಶರಥ-
ನಂದನರೊಪ್ಪನೆ ೩೭

ಮುನಿಗಳ ಹರಕೆಗ-
ಳನು ಕೊಂಡೆಂಪನು
ಘನಗಂಭೀರ-
ಧ್ವನಿ ದಾಶರಥಿ ೩೮

"ನಿಲುವೆವು, ಮುನಿ, ಕಾ-
ಯುಲಿಕಧ್ವರವನು
ಒಲವನು ಮುರಿದಿ-
ಕ್ಕುವು ರಕ್ಕಸರಾ ೩೯

ಇದಿರಾಂತವರನು
ಸದೆದಿಕ್ಕುವೆವು,
ಹೆದರದೆ ಕೈಕೊ-
ಳ್ಳುದು ದೀಕ್ಷೆಯನು " ೪೦

ಮುನಿದನು ಮಾರೀ-
ಚನು ರಾಮನ ನುಡಿ-
ಯನು ಕೇಳುತಲುರಿ-
ಯನು ಕಾರಿದನು ! ೪೧

ಕತ್ತಲೆಯೊಡಗಲು
ಮುತ್ತಿದರೆಲ್ಲಿಯು
ನೆತ್ತರನೆರೆಯುತೆ
ಸುತ್ತಲಸುರರು ೪೨

ಇರಿದುದು ರಾಮನ
ಶರಗಳು ಸುಬಾಹುವ-
ನುರುಳಿದನವನನು-
ಪೊರೆದು ಧರಣಿಗೆ ೪೩

ದೂರದ ಜಳಧಿಗೆ
ಬೇರೊಂದಂಬು
ಹಾರಿಸಿದುದಲೇ
ಮಾರೀಚನನು ! ೪೪

ಕುತ್ತಲು ಲಕ್ಷ್ಮಣ-
ನೆತ್ತಲು ಬಿದ್ದರು
ನೆತ್ತರ ಕಾರುತೆ
ಮುತ್ತಿಸಸುರರು ೪೫

ಅಳಿದುದು ರಾಕ್ಷಸ-
ಬಲವು, ಮಹಾತ್ಮರ
ಬಲದಿದಿರಲಿ ಖಳ-
ಬಲವೇತರದೋ ? ೪೬

ಕೃತಕೃತ್ಯರು ಮುನಿ-
ಪತಿಯುಡಿದಾವರೆ-
ಗತಿವಿಸಯುದೆ ನೃಪ-
ಸುತರೆರಗಿದರು ೪೭

" ಬೆಸಸುವುದೈ ಸಮ-
ಗೊಸೆದಿನ್ನಾವುದು
ಬೆಸಸವು, ನಾವದ-
ನೆಸಗುವೆವು, ಮುನೀ " ೪೮

ಎಂದೊಡೆ ಮುನಿಯಾ-
ನಂದದೆ ಹರಸುತ-
ಲೆಂದನು, " ಕೃತಿ ನಿ-
ವ್ವಿಂದಿಹೆನಿಂದು ೪೯

"ಜಯಶೀಲರೆ, ನಿ-
ಮ್ಮಯ ಶೌರ್ಯದೆ ನಿ-
ರ್ಭಯರಾಗಿಹೆವ-
ಕ್ಷಯಕೀರ್ತಿಗಳೇ ೫೦

"ಬಂದಿಹುದೈ ಕರೆ-
ಯೊಂದು ಜನಕನೃಪ-
ನಿಂದೆ ಸುಖಕೆ ಬಹು-
ದೆಂದು, ರಘುವರಾ ೫೧

"ಜನಕನ ಮನೆಯಲಿ
ಧನುವೊಂದಿರುವುದು,
ಅನುಪಮವೈ ತ್ರಿಣ-
ಯನನಿತ್ತುದದು ೫೨

"ಸುರರಸುರರು ಯ-
ಕ್ಷರು ಗಂಧರ್ವರು
ನರರೆತ್ತಲಕಾ-
ರದು ಚಾಪವನು ೫೩

"ನೃಪನಾಥಮಿನ
ಬೆಡಗನು ನೋಡಲು
ನಡೆವುದು ನೀನೆ-
ನ್ನೊಡನೆ ಮಿಥಿಲೆಗೆ" ೫೪

ಮುಗಿದುದು ಯಜ್ಞವು,
ಮಿಗೆ ಮುನಿವರ್ಯರು
ಸೊಗವಾಂತರು, ಮಿಥಿ-
ಲೆಗೆ ಸಾಗಿದರು ೫೫

ಇದು ಚತುರ್ಥಾಧ್ಯಾಯವು.

ಶ್ರೀಃ

# ಪಂಚಮಾಧ್ಯಾಯವು

ಶ್ರೀರಘುಕುಲಮಣಿ
ವೀರಶಿರೋಮಣಿ
ಕಾರುಣಿಕಾಗ್ರಣಿ
ತಾರಕ ಶರಣು ೧

"ಹೊರಟನು ಹಿಮವ-
ದ್ಗಿರಿಯುಡಿಯೆಡೆಗು-
ತ್ತರದಿಸೆಗಾರಘು-
ವರರೊಡನೆ ಮುನಿ ೨

ವಿತತಯುಶರು ನಡೆ-
ಯುತಲಿರಲಾನೃಪ-
ಸುತರೊಯ್ಯನೆ ತೀ-
ಡಿತು ತಣ್ಗಾಳಿ ೩

ಉಲಿದುವು ಶಕುನಿಗ-
ಳೊಲಿದೊಲಿದತಿಮಂ-
ಜುಲನಾದದಲುಲಿ
ಲಲಿತವಡೆನಿತೋ ! ೪

ಬರುತಡವಿಯೊಳ-
ಚ್ಚರಿಯೊಂದನು ಕಂ-
ಡರು, ಮುನಿಗಿಂತೆಂ-
ದರು ರಾಘವರು ೫

"ಇದು ದಿವ್ಯಾಶ್ರಮ-
ಪದದಂತಿರುವುದು,
ಇದು ನಿರ್ಜನವಾ-
ದುದು ಮುನಿಯೇಕೆ? ೬

"ಒಲೆದಿಹುವೀ ನೆಲ-
ದಲಿ ತರುಲತೆಗಳು
ಫಲಕುಸುಮಗಳಿಂ-
ದಲಿ ಚೆಲ್ವಿಡಿದು ೭

"ಅರರೇ, ಜನರೇ-
ಕಿರರೀಯೆಡೆಯೊಳು?
ಇರವೇಕೈ, ಮುನಿ-
ವರ, ವಿಹಗಗಳು? ೮

"ಕೊಳದಲಿ ತಾವರೆ-
ಗಳು ಬಿರಿದಿರೆ, ಪರಿ-
ಮಳವುಣಲಿರದೇ-
ಕಳಿಸಂಕುಳವು? ೯

“ ಶಿಲೆಯೆಂತಹುದಿದು ?
ಬಲುಸೇಹವು ಬಗೆ–
ಯಲಿ ಸಮುಗೊಡವಿದು–
ದಲೆ ಕಂಡೊಡನೆ! ೧೦

“ ಜನಸಿಯ ಸಂದ–
ರ್ಶನದಂತೀಶಿಲೆ
ಜನಿಯಿಸುವುದು ಸಲು–
ವಸು ಹೃದಯದಲಿ! ” ೧೧

ಎಂದಾಶಿಲೆಗಭಿ–
ವಂದಿಸಿ ದಶರಥ–
ನಂದನರಲ್ಲಿಯೆ
ನಿಂದರು ಕೂರ್ತು ೧೨

ಮುನಿ ಕೇಳಿದನೆಂ–
ದನು, “ ಪರಮತಪೋ–
ಧನನಿರುವನು ವರ
ಮುನಿ ಗೌತಮನು ೧೩

“ ವಿಮಲಾತ್ಮನ ಗೌ–
ತಮನ ಮಹಾತ್ಮನ
ಸುಮಹಾಯಶನಾ–
ಶ್ರಮವಿದು, ರಾಮಾ ೧೪

" ಪತಿದೇವತೆಯು-
ಪ್ರತಿಮಲಲಿತತನು
ಸತಿಯಾದಳು ಸು-
ವ್ರತನಿಗಹಲ್ಯೆ ೧೫

" ಸುರಪತಿ ಬಂದೊಂ-
ದಿರುಳಾಸತಿಯುಲಿ
ಚರಿಸಿದನೈ ಅಪ-
ಚರಿತವನಕಟಾ ! ೧೬

" ಮುನಿದನು ಮುನಿ ಬೈ-
ದನು, ' ಶಿಲೆಯಾಗೀ-
ವನದಲಿ, ಕಲುಷಾಂ-
ಸನಿ ಬಿದ್ದಿರಲೇ ! ೧೭

" ಇದು ದುಶ್ಚರಿತಾ-
ಸ್ಪದವಾದುದು ವನ-
ವಿದರೊಳು ಜೀವವು
ಬದುಕಲುಬೇಡಾ ! ೧೮

" ಮಲಿನಾತ್ಮನು ನೀ-
ಸಲೆ ! ರಂಧ್ರಗಳಾ-
ಗಲಿ ನಿನ್ನಯ ಮೆ-
ಯ್ಯಲಿ, ದೇವೇಂದ್ರಾ ! ೧೯

" ಅನುಜನೊಡನೆ ಬರು–
ವನು ದಶರಥನೃಪ–
ತನಯನು ರಾಮನು
ವನದಲಿ ಮುಂದೆ ೨೦

" ಕರುಣಾನಿಧಿರಘು–
ವರನ ನೋಂಕಿಗೀ–
ವರತನು, ಚಂಚಲೆ,
ಬರುವುದು ಮರಳಿ' ೨೧

" ನುಡಿದಿಂತಾಮುನಿ
ನಡೆದನು ಬೇರೊಂ–
ದೆಡೆಗೆ ಮರುಗಿ ತಪ–
ಕೆಡರಾಯ್ತೆಂದು ೨೨

" ಅಂದಿನ ದಿನದಿಂ–
ದಿಂದಿನವರೆಗಾ–
ಸುಂದರತನು ಶಿಲೆ–
ಯಂದದಲಿಹಳು ೨೩

" ತ್ವರಿತದೆ, ಪಾವನ-
ಚರಿತನೆ ಕರುಣಾ-
ಕರ, ದೀನೆಯನು–
ದ್ಧರಿಸೈ, ರಾಮಾ!" ೨೪

ಮುನಿಯಾಡಿದ ಮಾ-
ತನು ಕೇಳುತೆ ರಾ-
ಮನ ವಂದಿಸಿ ಶಿಲೆ-
ಯನು ಸೋಂಕಿದನು ೨೫

ವಿಲಸತ್ಪ್ರಭೆ ಸಿ-
ಮುಗಲೆ ರಾಘವನಿದಿ-
ರಲಿ ನಿಂದಳು ಕೋ-
ಮಲೆ ಕೆಯ್ಮುಗಿದು ೨೬

ಎರಗಿದರಾಕೆಯು
ಚರಣಕೆ ಕಾಕು-
ತ್ಸ್ಥರು, ಹೂಮಳೆಯನು
ಕರೆದರು ಸುರರು ೨೭

ಪುಲಕಿತವಾದುದು
ಲಲನೆಯ ತನು, ಕ-
ಣ್ಣಾಲಿ ತುಂಬಿದುವು
ಜಲಧಾರೆಗಳು ೨೮

" ಸ್ತುತಿಸಲರಿಯೆ ಗ-
ರ್ಹಿತೆ ನಿನ್ನನು, ರಘು-
ಪತಿ, ಉದ್ಧರಿಸಿದೆ
ಪತಿತೆಯನಿಂದು ! " ೨೯

ಎರಗಿದಳಿಂತೆಂ-
ದರವಿಂದಾನನೆ
ಮುರಳಿ ಮುರಳಿ ರಘು-
ವರನ ಚರಣಕೆ ೩೦

ಬಲವಂದಳು ಮುನಿ-
ಕುಲವನು, ನಡೆದಳು
ಲಲನೆ ವಿರಚಿತಾಂ-
ಜಲಿ ಪತಿಯೆಡೆಗೆ ೩೧

ಮುನಿ ದಶರಥನಂ-
ದನರೊಡನೈತಂ-
ದನು ಮಿಥಿಲೆಗೆ ಪಾ-
ವನ ದರ್ಶನನು ೩೨

ಇದು ಪಂಚಮಾಧ್ಯಾಯವು

ಶ್ರೀಃ

# ಷಷ್ಠಾಧ್ಯಾಯವು

ಶ್ರೀರಘುಕುಲಮಣಿ
ವೀರಶಿರೋಮಣಿ
ಕಾರುಣಿಕಾಗ್ರಣಿ
ತಾರಕ ಶರಣು ೧

ಜನಕನಮೇಯಾ–
ತ್ಮನು ಮುನಿ ಬಂದಿಹು–
ದನು ಕೇಳುತೆ ಬಂ–
ದನು ನಲವಿಂದೆ ೨

ಪರಮಾದರದಿಂ–
ದರಸನು ಮುನಿಪನ
ಚರಣಾಂಬುಜಗಳಿ–
ಗೆರಗಿ ನುಡಿದನು ೩

“ ಬಂದಿರಿ, ಮುನಿ, ಕೃಪೆ–
ಯಿಂದಲಿ ಸನ್ಮುನಿ–
ವೃಂದದೊಡನೆ ನೀ–
ವಿಂದು ಮಿಥಿಲೆಗೆ ೪

" ಸ್ವಾಗತವು, ಮಹಾ-
ಭಾಗನೆ, ನೀನ-
ಭ್ಯಾಗತನೆನಗಿಹೆ,
ಯೋಗಿಪ್ರವರಾ! ೫

" ಭುವನಮನೋಹರ-
ರಿವರಾರೈ ಎಳ-
ಗುವರರು, ಕೌಶಿಕ,
ದ್ವಿಜೋಪಮರು ?" ೬

ಮುನಿ ನುಡಿದನು, " ಕೇ-
ಳಿನಕುಲದವನೀ-
ಶನು ದಶರಥನಾ-
ತನ ಸುತರಿವರು ೭

" ಹಿರಿಯನು ರಾಮನು
ಕಿರಿಯನು ಲಕ್ಷ್ಮಣ-
ನುರುವಿಕ್ರಮರಿವ-
ರರಿಮರ್ದನರು ೮

" ಅರಸನೆ, ಧರ್ಮಾ-
ಚರಣಕ್ಕೊದವಿಸಿ-
ದರು ವಿಘ್ನವನಸು-
ರರು ದುರ್ಮದರು ೯

' ಅವರಳಿದರಲೇ
ಇವರಿಷುಹತಿಗಾ-
ಹವದಲಿ, ನೃಪ, ವಿ-
ಘ್ನವು ಬಯಲಾಯ್ತು ೧೦

" ಅನಘನಹಲ್ಯೆಯು-
ಸನುನಯದಲಿ ಬಂ-
ಧನದಿಂದೀರಾ-
ಮನು ಬಿಡಿಸಿದನು ೧೧

" ಶಿವಧನುವನು ನೋ-
ಡುವ ಕೌತೂಹಲ-
ವಿವಶನು ತಂದುದು
ಭವನಕೆ ನಿನ್ನಾ " ೧೨

ಮುನಿಯೆಂದುದನಾ-
ಜನಪತಿಯಾಲಿಸಿ
ಮನದೊಳು ಮುದವಾಂ-
ತನು ತಲೆದೂಗಿ ೧೩

ವಿನಯದಲೆಂದನು,
" ಧನುವನು ನಾಳಿನ
ದಿನದಲಿ ಕುವರರು,
ಮುನಿ, ನೋಡುವರು. ೧೪

" ವದನವು ಸೂಚಿಸು-
ವುದು ಬಳಲಿಹುದನು,
ಒದವಿದ ದಣುವನು
ಮೊದಲುಡುಗಿಸಿರೈ " ೧೫

ನರಪತಿಯಿಂತೆಂ-
ದರಮುನೆಗವರೆ-
ಲ್ಲರನುಯ್ದನು ಹಿರಿ-
ಹಿರಿ ಹಿಗ್ಗುತಲಿ ೧೬

ವಿಪುಲಹೃದಯನಾ-
ನೃಪಮಣಿ ವಿಧವಿಧ-
ದುಪಚಾರಗಳಿಂ-
ದುಪಚರಿಸಿದನು ೧೭

ಅತಿಥಿಗಳನು ಸ-
ನ್ನುತಯಶನಾನರ-
ಪತಿ ತೋಷಿಸಿದನು
ಹಿತಮಿತಭಾಷಿ ೧೮

ಮರುದಿನ ಕೃತಕ-
ರ್ಮರು ಮುಖಶಾಲೆಗೆ
ಅರಸನೊಡನೆ ಬಂ-
ದರು ರಾಘವರು ೧೯

ನೃಪನಂದನರಿಗೆ
ನೃಪನೆಂದ “ ನಿದೋ
ತ್ರಿಪುರಾರಿಯ ಧನು
ವಿಪುಲಪ್ರಭವು ೨೦

“ ಧಾರಿಣಿಯೊಳಗಿದ-
ನಾರೂ ಮಣಿಸಲಿ-
ಕಾರರು ಧನುವನು,
ಹೇ ರಘುವೀರಾ ೨೧

“ ಇರುವಳಿನಗೆ ಭಾ-
ಸುರವವು ಸುತೆ ಸುಂ-
ದರಿಯೆನ್ನದಿದೊಂ-
ದಿರುವುದು ಪಣವು ೨೨

“ ಧನುರಾರೋಪಣ-
ವನು ಮಾಡುವ ವೀ-
ರನಿಗಾನೀವೆನು
ತನುಜೆಯನೆಂದು ೨೩

“ ಸೀತೆಯನಿಚ್ಛಿಸಿ
ಮಾತಿನ ವೀರರು
ಸೋತರನೇಕರು,
ಭೀತಿವಡೆದರು ೨೪

" ಮಣಿಸಲು, ರಘುಕುಲ-
ಮಣಿ, ಯತ್ನಿಸುವುದು,
ಮಣಿಸಿದೊಡಾಪೆ-
ಣ್ಮಣಿ ನಿನ್ನವಳೈ ! ೨೫

" ಬಲಶಾಲಿಯೆ, ನೋ-
ಡಲಿ ನಾಳಿನ ದಿನ-
ದಲಿ ನೆರೆದರಸರು
ಬಲವನು ನಿನ್ನಾ " ೨೬

ನುಡಿದಿಂತಾತನು
ನಡೆದನು ಸಂತಸ-
ವಡುತಾರಘುವರ-
ರೊಡನರಮನೆಗೆ ೨೭

ಬಂದರು ಕುವರರು
ಚೆಂದವ ನೋಡಲು
ಅಂದಿನ ಸಂಜೆಯೊ-
ಳೊಂದುಪವನದಾ ೨೮

ತಿಳಿಗೊಳದೊಳು ಮಂ-
ಜುಳನಿನದದ ತೆರೆ-
ಗಳೊಳೊಲೆದಾಡುವ
ಜಳಜಗಳೆನಿತೋ ! ೨೯

ಅರಳಿದ ಹೂಗಳ
ಪರಿಮಳಕೆರಗುವ
ಪರಮೆಗಳಾಗಾ-
ವರವೆನಿತಿನಿದೋ ! ೩೦

ಕೊಳಲನು ಬಾಜಿಸು-
ತೆಳವಿದಿರಿನ ಮೆಳೆ-
ಯೊಳು ಕುಣಿಸುವುದೆಲ-
ರೆಳಲತೆಗಳನು ೩೧

ಗಿಳಿಗಳ ಕೋಗಿಲೆ-
ಗಳ ಸಾರಿಕೆಗಳ
ಕಳರುತಿ ಮನವನು
ಸೆಳೆಯುತಲಿಹುದು ೩೨

ಎನಿತಿನಿದೋ, ದನಿ-
ಯೆನಿತಿನಿದೋ ! ಹೂ-
ವಿನ ತೋಟದಲಾ-
ದನಿಯೆನಿತಿನಿದೋ ! ೩೩

ಸರಸತಿ ನುಡಿಯಿಪ
ಸರಸವಿಪಂಚಿಯು
ಸರದಂತೆ ಮಸೋ-
ಹರವಾದುದಲೇ ! ೩೪

ದನಿಯೋ ಅಮೃತದ
ಕೆನೆಯೋ ? ಜಾನಕಿ,
ನಿನಗೆಂತಾದುದು
ದನಿಯಿಂತಿನಿದು ? ೩೫

ಕೊರಲನು ರಾಮನು
ತಿರುಗಿಸಿದನು ದನಿ
ಬರುವೆಡೆಯತ್ತಲು
ಪರವಶನಾಗಿ ೩೬

ಅದು ಗೋಚರವಾ-
ದುದು ದಿವ್ಯಾಕೃತಿ !
ಅದು ಸೌಂದರ್ಯದ
ಸದಮಲಮೂರ್ತಿ ! ೩೭

ಉಲ್ಲಸವೆಸಿತೋ
ಹುಲ್ಲೆಯ ಮರಿಗೆಳ-
ವುಲ್ಲನು ಮೆಲಿಸುವ
ಫುಲ್ಲನಯನೆಗೆ ! ೩೮

ಅಡಿಯಡಿಗದೊ ಮು-
ದ್ದಿಡುವಳು ಕೋಮಲೆ
ನುಡಿಯಿಸುವಳು ನ-
ಲ್ನುಡಿಯಿಂದದನು ! ೩೯

ಕತ್ತ್ರಸು ಸಮರುವ-
ಳೊತ್ತುವಳಿದೆಗೆ
ನೆತ್ತಿಯು ತಟ್ಟುತ-
ಲೆತ್ತಿಳಿಸುವಳು ೪೦

ಆಡುವಳದರೊಡ-
ನೋಡುವಳೊಮ್ಮೆ
ಬೇಡಲು ಹುಲ್ಲನು
ನೀಡುವಳೊಮ್ಮೆ ೪೧

ನಡೆದುದು ರಘುವರ-
ನೆಡೆಗಾಮೃಗಶಿಶು
ನಡೆದಳು ಬೆಂಬಳಿ-
ಪಿಡಿದಾಸೀತೆ ೪೨

ಮರಿ, ಬಾ ! ಬಾ ! ಹಿಂ-
ದಿರುಗೆಂದೆನುತಲಿ
ಕರೆದಳು ಜಾನಕಿ-
ಯೆರಳೆಯನೊಸೆದು ೪೩

ಕರೆಯನು ಕೇಳದೆ
ಮರಿಯೋಡಿತು ! ಮುಂ-
ಬರಿದಳವನಿಸುತೆ
ತರಲದನೆಂದು ೪೪

ಹಿಡಿಯಲು ಹೋದನ-
ಳೆಡರೊದವಿದುದೆನೆ
ತಡೆದಳು ತಟ್ಟನೆ
ನಡುವೆಯೆ ಬಾಲೆ ೪೫

ಮನಸೋತಳು ಕಂ-
ದನುಪಮಲಾವ-
ಣ್ಯನಾರಘುವೀ-
ರನನು ಮನೋಜ್ಞೆ ೪೬

" ಸುರುಚಿರತನು ಭಾ-
ಸುರತೇಜನು ರಘು-
ವರನಿವನೇನೈ
ಪುರುಷೋತ್ತಮನು ? ೪೭

" ಇಂದು ಬೆಳಗಿನಲಿ
ಸುಂದರನನು ಮುದ-
ದಿಂದೆ ಹೊಗಳಿದರು
ತಂದೆ ಮನೆಯಲಿ ೪೮

" ಎಲೆ ಹೃದಯವೆ, ನಡು-
ಗಲುಬೇಡೈ ! ರಘು-
ಕುಲಮಣಿ ಪಣವನು
ಗೆಲುವನು ಪಿತನಾ ! " ೪೯

# ಷಷ್ಠಾಧ್ಯಾಯವು

ಧರಣೀಸುತೆಯೀ–
ತೆರದಲಿ ಚಿಂತಿಸು–
ತಿರಲಲ್ಲಿಗೆ ಸಖಿ–
ಯರು ಬಂದರಲೇ ! ೫೦

ನಸುನಗೆ ಮೊಗದ–
ಲ್ಲೆಸೆಯಲು ಮನವೊಸೆ–
ದನಿಯುಳಿಗೇನನೊ
ಪಿಸುಗುಟ್ಟಿದರು ೫೧

" ಇರುಳಾಯ್ತೌ ಮೆ–
ಯ್ಮರೆತಿಲ್ಲಯೆ ನಿಂ–
ತಿರುವುದಿದುಚಿತವೆ ?
ತಿರುಗೌ ಮನೆಗೆ ! " ೫೨

ಎಂದೊಡೆ ನಾಚುತ–
ಲಿಂದುವದನೆ ನಿಜ–
ಮಂದಿರಕ್ಕೈತರ–
ಲೆಂದು ನೆಡೆದಳು ೫೩

ಇದು ಷಷ್ಠಾಧ್ಯಾಯವು

ಶ್ರೀಃ

# ಸಪ್ತಮಾಧ್ಯಾಯವು

ಶ್ರೀರಘುಕುಲಮಣಿ
ವೀರಶಿರೋಮಣಿ
ಕಾರುಣಿಕಾಗ್ರಣಿ
ತಾರಕ ಶರಣು ೧

ಮರುದಿನ ಮಿಥಿಲಾ-
ಪುರಿಯ ಜನರು ಕಿ-
ಕ್ಕಿರಿದು ನೆರೆದರ-
ಧ್ವರಶಾಲೆಯಲಿ ೨

ಬಂದರು ವಿಪ್ರರು,
ಬಂದರು ರಾಜರು,
ಬಂದರು ವೈಶ್ಯರು,
ಬಂದರಿತರರು ೩

ಜನರು ನೆರೆಯೆ ಬಂ-
ದನು ಮಖಶಾಲೆಗೆ
ಜನಕನೃಪತಿ ರಾ-
ಮನನೊಡಗೂಡಿ ೪

## ಸಪ್ತಮಾಧ್ಯಾಯವು

ಜಿತಮದನನ ರಘು-
ಪತಿಯಂಗದ ಲಲಿ-
ತತೆ ಸೆಳೆದುದು ಜನ-
ತತಿಯ ಮನವನು ೫

ಅನಿಮಿಷನಯನರು
ಜನರೊಲಿದೊಲಿದಾ-
ತನ ವದನಶ್ರೀ-
ಯನು ನೋಡಿದರು ೬

ಧರಣೀಶನು ಮನ-
ದೆರಕದಲಾಸಭಿ-
ಕರಿಗೆಂದನು ಮುನಿ-
ವರನನುಮತದೆ ೭

"ಶ್ರೀರಾಮನು ಜಿತ-
ವೈರಿಯಿವನು ಗಂ-
ಭೀರನು ರಘುಕುಲ-
ವಾರಿನಿಧೀಂದು ೮

"ಅನುವಾಗಿಹನೀ-
ತನು ಶಿವಕಾರ್ಮುಕ-
ವನು ಮಣಿಸಲು ಮುನಿ-
ಯನುಮತಿಯಿಂದೆ" ೯

ಜನಕನು ನುಡಿದಿಂ-
ತನುನಯುದಲಿ ರಾ-
ಮನ ವದನಾಂಬುಜ-
ವನು ನೋಡಿದನು ೧೦

ನರವೀರನು ರಘು-
ವರನೆದ್ದನು ಮುನಿ-
ಚರಣಾಂಬುಜಕಾ-
ದರದೆರಗಿದನು ೧೧

ಮೃಡನನು ನೆನೆಯುತೆ
ನಡೆಗನು ಧನುವಿ-
ದ್ದೆಡೆಗದನಾತನು
ಹಿಡಿದೆತ್ತಿದನು ೧೨

ಬಲವೆನಿತೋ ರಘು-
ಕುಲವರ್ಧನನಿಗೆ!
ಅಲರಾದುದು ಕೈ-
ಯುಲಿ ಕಾರ್ಮುಕವು! ೧೩

ಅದಕೇರಿಸಿದನು
ಹೆದೆಯನು ಲೀಲೆಯ-
ಲದನೆಳೆದೊಡನೊದ-
ವಿದುದದ್ಭುತವು! ೧೪

ಮಸಗುತೆ ನಿನದವು
ಪಸರಿಸಿದುದು ದೆಸೆ-
ದೆಸೆಯೊಳು, ನಡುಗಿತು
ವಸುಧಾತಲವು ೧೫

ಬಿರುಸರವನು ಕೇ-
ಳ್ದರಿವಳಿದರಸರು
ಧರೆಗಾಸನದಿಂ-
ದುರುಳುರುಳಿದರು ೧೬

ನರಪತಿಗಾಯ್ತು-
ಚ್ಚರಿ, ಕಣ್ದಾವರೆ-
ಯರಳಿರೆ ಕಂಡನು
ಮುರಿದ ಧನುವನು! ೧೭

ಜನಕನ ಸಂತಸ-
ವೆನಿತೋ, ರಘುವೀ-
ರನ ಬಳಿಗೈತಂ-
ದನು ರಭಸದಲಿ ೧೮

ಸುಗುಣನಿಲಯನಾ
ಅಗಣಿತ ಮಹಿಮನ
ಹೆಗಲೊಳು ಕೈಯನು
ನಗುತಿರಿಸಿದನು ೧೯

"ಪಣವನು, ವೀರಾ–
ಗ್ರಣಿ, ಶಿವಧನುವನು
ಮಣಿಸಿ ಮುರಿದು, ಸ–
ದ್ಗುಣನಿಧಿ, ಗೆಲ್ದೈ!" ೨೦

ಎಂದು ನುಡಿಯುತಿರೆ,
ಬಂದಳಸಿತರೊಳು
ಮಂದಗಮನೆಯರ–
ವಿಂದನಿಭಾಸ್ಯೆ ೨೧

ಸೂಸುತೆ ಕುಸುಮಸು–
ವಾಸಿತತನು ಮೃದು–
ಹಾಸದ ಶೋಭೆಯ–
ನಾಸಭೆಯಲ್ಲಿ ೨೨

ನಸುಗಂಪಿನ ಹೂ–
ಸರವನು ಸುಂದರಿ–
ಯಿರಿಸಿದಳಾರಘು–
ವರನ ಕೊರಲಲಿ ೨೩

ಮಣಿಕಾಂಚನಭೂ–
ಷಣೆ ಜಾನಕಿ ಕಿಂ–
ಕಿಣಿ ಝಣಝಣರೆನೆ
ಮಣಿದಳವನಿಗೆ ೨೪

ಮೊಳಗಿದುವಂಬರ-
ದೊಳು ಸುರವಾದ್ಯಂ-
ಗಳು, ಕರೆದರು ಹೂ-
ಮಳೆಯನಮರರು ೨೫

ಅರಸನು ಬೆಸಸಲು,
ಹೊರಟರು ದಶರಥ-
ನರಪತಿಯನು ಕರೆ-
ತರಲು ಸಚಿವರು ೨೬

ತ್ವರಿತದೆ ಮಿಥಿಲಾ-
ಪುರದಿಂದೈತಂ-
ದರಯೋಧ್ಯೆಗೆ ಸಚಿ-
ವರು ಮೈಥಿಲನಾ ೨೭

ಅರಮನೆಗೈದಿದ-
ರರಸನಿಗವರಾ-
ದರದಿಂದಿಂತೆಂ-
ದರು ಕೈಮುಗಿದು ೨೮

"ಸುರಪತಿಸಖ, ನೀ-
ವರಿವುದು ಮಿಥಿಲಾ-
ಪುರದರಸನ ಸಚಿ-
ವರು ನಾವೆಂದು" ೨೯

'' ಸ್ಥಿತಮತಿ ಜನಕ ನೃ-
ಪತಿಯೆನಗೇನಾ-
ಣತಿಯನು ಗೈದನು,
ಚತುರಮತಿಗಳೇ !'' ೩೦

ನರಪತಿಯಿಂತೆನೆ,
ಹರುಷದೆ ಮಿಥಿಲಾ-
ಪುರದಲಿ ನಡೆದುದ-
ನರುಹಿದರವರು ೩೧

ಕ್ಷಿತಿನಾಥನು ವಿ-
ಸ್ಮಿತನಾದನು ನಿಜ-
ಸುತನಾಸಾಹಸ-
ಕೃತಿಯನು ಕೇಳ್ದು ೩೨

ಒಸಗೆಯನಿದನಾ-
ಲಿಸುತೆ ವಸಿಷ್ಠರು
ವಸುಧಾಧೀಶನಿ-
ಗೊಸೆದು ನುಡಿದರು ೩೩

'' ಅತುಲಬಲನು ಸ-
ನ್ಮತಿಯುವನಮಿತ-
ದ್ಯುತಿ ತನುಜನು, ಭೂ-
ಪತಿ, ನಿನ್ನವನು ! ೩೪

"ಜನಕನು ರಘುವೀ–
ರನಿಗೀವನು ನಿಜ–
ತನುಜೆಯನೆಂಬುದ–
ದೆನಗುತ್ಸವವು ! ೩೫

" ಪೃಥಿವೀಶ್ವರ ಸತ್–
ಪಥಪಾಲಕ ದಶ–
ರಥ, ಹೊರಡುವುದೈ
ಮಿಥಿಲಾಪುರಿಗೆ " ೩೬

ಅರಸನು ನಡೆದನು
ಮರುದಿನ ಮಿಥಿಲೆಗೆ
ಗುರುವಿನೊಡನೆ ರಘು–
ವರನ ಮದುವೆಗೆ ೩೭

ಇದು ಸಪ್ತಮಾಧ್ಯಾಯವು.

ಶ್ರೀಃ

## ಅಷ್ಟಮಾಧ್ಯಾಯವು

ಶ್ರೀರಘುಕುಲಮಣಿ
ವೀರಶಿರೋಮಣಿ
ಕಾರುಣಿಕಾಗ್ರಣಿ
ತಾರಕ ಶರಣು ೧

ಜನಕಮಹಾರಾ-
ಜನ ನಗರಕೆ ಬರೆ
ಜನಪನು ದಶರಥ-
ನೆನಿತುತ್ಸವವೋ ! ೨

ಮಿಳಿರುವ ಗುಡಿಗಳು,
ತಳಿರಿನ ತೋರಣ-
ಗಳು, ಹೊಳಲಲಿ ಕಂ-
ಗೊಳಿಸುವುವೆನಿತೋ ! ೩

ಹೊಳೆಹೊಳೆವಾರತಿ-
ಗಳ, ಕನ್ನಡಿಗಳ,
ಕಳಸಗಳೋಳಿಯು
ಬೆಳಕಿನ ಸುಗ್ಗಿ ! ೪

ಪಸರಿಸಿದುದು ದೆಸೆ-
ದೆಸೆಯೊಳು ನಿಃಸ್ವನ-
ದೆಸಕವು ರಭಸದ-
ಲೊಸಗೆವರೆಗಳಾ ೫

ಜನಪತಿದಶರಥ-
ನನು ಪರಮೋದಾ-
ರನು ಜನಕನು ಕಂ-
ಡನು ಸಂತಸದೆ ೬

ಸಪುರೋಹಿತನನು
ನೃಪತಿಯುನಾತನು
ಉಪಚರಿಸಿದನೈ
ಸಪುರೋಹಿತನು ೭

ಪುಲಕಿತತನು ಮುನಿ-
ಕುಲಪತಿ ರಾಘವ-
ಕುಲಗುರು ಜನಕನಿ-
ಗೊಲಿದು ನುಡಿದನು ೮

“ ಅವನಿಪ, ಸಮುಗಿ-
ಷ್ಟವು ಜನಕರ ರಾ-
ಘವರೀ ಸಂಬಂ-
ಧವು, ವಿಮಲಾತ್ಮಾ ೯

" ಧೀಮಂತನು ನೀ-
ನ್ನೀಮಬಲಾಢ್ಯನು
ರಾಮನು ಭುವನಾ-
ರಾಮನು, ನೃಪತೀ ೧೦

" ಅನುಪಮೆ ನಿನ್ನಯ
ತನಯೆ ಸುಗುಣಶಾ-
ಲಿನಿ ಜಾನಕಿಯಾ-
ತನಿಗನುರೂಪೆ ೧೧

" ಸುಲಲಿತತನುವು-
ರ್ಮಿಳೆಯೆಂಬಿನ್ನೊ-
ರ್ವಳು, ನೃಪ, ನಿನಗಿರು-
ವಳು ಮಗಳಲ್ತೇ? ೧೨

" ಮುದವನು ಹೆಚ್ಚಿಸು-
ವುದು, ಕನ್ನೆಯನೀ-
ವುದು, ಲಕ್ಷ್ಮಣನಿಗೆ
ವಿದಿತಯಶನಿಗೆ " ೧೩

ಎಂದು ನುಡಿಯೆ, ನೃಪ-
ನೆಂದನು ನಯನಗ-
ಳಿಂದೆ ಸುರಿಯಲಾ-
ನಂದಾಶ್ರುಗಳು ೧೪

" ಮುನಿ, ನಿಮ್ಮಾಣತಿ-
ಯನು ಶಿರದಲಿ ತಳೆ-
ವೆನು, ಕುಲವಿದು ಪಾ-
ವನವಾಯ್ತೆನ್ನಾ ! ೧೫

" ಸುತೆಯರದಾವ ಸು-
ಕೃತವನು ಗೈದರೊ ?
ಸತಿಯರಹರು ಸ-
ನ್ನುತಕೀರ್ತಿಗಳಾ ! ೧೬

" ಅರಿಕೆಯಿದಿನ್ನೊಂ-
ದಿರುವುದು, ಮುನಿ, ಕೇ-
ಳಿರಿ, ತನುಜೆಯರಿ-
ಬ್ಬರು ತಮ್ಮನಿಗೆ ೧೭

" ಸುರುಚಿರತೇಜನು
ಭರತನು ಹೃದಯೇ-
ಶ್ವರನಾಗಲಿ, ಮುನಿ-
ವರ, ಮಾಂಡವಿಯಾ ೧೮

" ಶ್ರುತಕೀರ್ತಿಯು ವಿ-
ಶ್ರುತ ಸೌಜನ್ಯೆಯು
ಪತಿಯಾಗಲಿ ಸ-
ನ್ಮತಿ ಶತ್ರುಹನು " ೧೯

ಒದವಿಸದೇ ಸ-
ಮ್ಮುದವನು ಹೃದಯದ-
ಲದು ಭೂಪತಿಯೆಂ-
ದುದು ದಶರಥನಾ ? ೨೦

ಸಲಿದರು ಕನ್ನೆಯ-
ರೊಲಿದು ವಿನುತರಘು-
ಕುಲದವರಿಗೆ ವಧು-
ವೆಲೆ ತಾವೆಂದು ! ೨೧

ಪರಮೋತ್ಸವದಲಿ
ಮೆರೆದುದು ಮಿಥಿಲಾ-
ಪುರಿಯಾರಘುವೀ-
ರರ ಮದುವೆಯಲಿ ೨೨

ಜನಿತಾನಂದನು
ಜನಪನು ಜನತೆಗೆ
ಧನಕನಕವನಿ-
ತ್ತನು ಮನವಾರೆ ೨೩

ಹೊರಟನು ನಿಜಪುರಿ-
ಗರಸನು ಹೃದಯವು
ಪರಿತೋಷದೆ ತುಂ-
ಬಿರೆ ದಶರಥನು ೨೪

ನಡೆದಿರೆ ಮಾರ್ಗದೊ–
ಳೆಡರುಗಳೊವ್ವೊಂದ–
ಲೊಡರಲು, ಹೃದಯವು
ನಡುಗಿತರಸನಾ ೨೫

ಬಿರಿಬಿರಿ ಬೀಸಿದು–
ಪೆರಚುತೆ ದೂಳನು
ಬಿರುಸರದೊದರುವ
ಬಿರುಗಾಳಿಗಳು ೨೬

ನೆರೆದುವು ಬಾನೊಳು
ಕರಿಮುಗಿಲುಗಳ–
ಬ್ಬರಿಸುತೆ ಮಿಂಚುತೆ
ತೆರಪಿಲ್ಲದೆಯೆ ೨೭

ಮುಸುಕಿತು ಕತ್ತಲೆ
ದೆಸೆದೆಸೆಗಳಲಹಿ
ಬಿಸಿನಂಜುಗುಳುತೆ
ಬುಸುಗುಟ್ಟಿದುವು ೨೮

ಮುದುಮಕ್ಕಳಿಗೇ–
ನೊದವುವುದೋ ಎಂ–
ದದಿರಿತು ದಶರಥ–
ನೆದೆ ಭೀತಿಯಲಿ! ೨೯

ಧೃತಿಗುಂದಿದನಾ–
ಕ್ಷಿತಿಪತಿಯುಕಟಾ!
ಸುತವಾತ್ಸಲ್ಯದ
ಗತಿ ತೀವ್ರವಲೇ ! ೩೦

ಸುಗಿದನು, ಕುಲಗುರು-
ವಿಗೆ ನುಡಿದನು ಕೈ
ಮುಗಿ “ದಿದರಿಂದೇ–
ನೊಗೆವುದು, ತಂದೇ ? ೩೧

“ ಉಳಿಯಿಸು ತಪದ–
ಗ್ಗಳಿಕೆಯುಲೀಹಾ–
ಪಳಿಯಿಂದಲಿ ಮ–
ಕ್ಕಳನು ಗುರುವರಾ !” ೩೨

ಎನುತಿರಲಿಂತಾ–
ಜನಪತಿ, ದೂರದೆ
ಘನಗಂಭೀರ–
ಧ್ವನಿ ಕೇಳಿಸಿತು ೩೩

ಇಳೆ ನಡುಗಿತು, ಗಿಡು–
ಗಳು ಮುರಿದುವು, ಮೃಗ–
ಗಳು ಸುತ್ತಲು ಭಯ–
ಗೊಳುತೂಳಿದುವು ೩೪

ನಿಂದುದನಿತರೊಳು
ಬಂದು ದಶರಥನ
ಮುಂದೆ ಬೆಳಕು ಕಡು-
ಪಿಂದೆ ಹೊಳೆಯುತೆ ೩೫

ಅದು ದಿವ್ಯದ್ಯುತಿ-
ಯದು ಪುರುಷಾಕೃತಿ
ಅದು ಭಾರ್ಗವನಾ-
ಸದಮಲಮೂರ್ತಿ ! ೩೬

ಹೊಳೆದುದು ಕಾಳಾ-
ನಳದಂತುಗ್ರವು
ಬೆಳಕಾಕ್ಷತ್ರಿಯ-
ಕುಳನಾಶಕನಾ ! ೩೭

ಆರದ ಹಸಿವಿನ
ಮಾರಿಯು ದಾಡೆಯೆ
ವೀರನ ಪರಶುವ
ಕೂರಲಗಾಯ್ತೋ ? ೩೮

ಎನಿತುಗ್ರವೊ ಆ-
ತನ ವೈಷ್ಣವಧನು !
ಇನಿಗೋಲ್ತೈ ಶಿವ-
ಧನುವದರೆಡೆಗೆ ! ೩೯

ಅವನುಗ್ರತೆಯನು-
ಭವವೊದಗುವುದೆಂ-
ದವನೀಶನ ಮೆ-
ಯ್ಬೆವರಿತು ಭಯದೆ ! ೪೦

ಪರಶುಧರನು ರಘು-
ವರನ ಬಳಿಗೆ ಬಂ-
ದುರಿಯುತೆ ನುಡಿದನು
ಬಿರುಸರದಿಂದೆ ೪೧

“ ಮುರಿದೈ ಮಾಹೇ-
ಶ್ವರಧನುವನು ಗಡ!
ನರಕೇಸರಿ ದಾ-
ಶರಥೀ, ನೀನು ! ೪೨

“ ಇದೊ ವೈಷ್ಣವಧನು,
ಹೆದೆಯೇರಿಸಿ ತೊಡು-
ವುದು ಸರಳನು ನೀ-
ನಿದಕೆ, ರಘುವರಾ ! ೪೩

“ ಆಗದೊಡೆಳೆ ತಲೆ-
ವಾಗುತೆನಗೆ ಶರ-
ಣಾಗತನಾಗುವು-
ದೀಗಳೆ ನೀನು ! ” ೪೪

ಎಂದೊಡೆ ದಶರಥ–
ನಂದನನೇನೆದೆ–
ಗುಂದಿದನೇ ಭಯ–
ದಿಂದೆ ಬಲಾಬ್ಧಿ ? ೪೫

ಧನುವನು ಕುಡೆ, ಕೊಂ–
ಡನು ಹೆದೆಯೇರಿಸಿ–
ದನು ಹೂಡಿದನಂ–
ಬನು ಲೀಲೆಯಲಿ ೪೬

ಶರವನು ಸಂಧಿಸಿ,
" ಗುರಿಯಿದಕೇನೈ ?
ಅರುಹೆಂದಾ " ರಘು–
ವರನು ನುಡಿದನು. ೪೭

" ಸರಜನು ರಾಮನು
ಬರಿದೆ ಧನುವಿನ–
ಲ್ಲಿರಿಸನು, ವಿಪ್ರನೆ,
ಗುರಿಯಿದಕೇನೈ ? ೪೮

" ಗತಿಶಕ್ತಿಯೊ, ಭೃಗು–
ಪತಿ, ತೀವ್ರತಪೋ–
ರ್ಜಿತಪರಲೋಕ–
ಸ್ಥಿತಿಯೋ ನಿನ್ನಾ ? " ೪೯

“ ವರಲೋಕಸ್ಥಿತಿ–
ಗುರಿ ಸಂಧಿಸಿದೀ–
ಸರಳಿಗೆ, ಗತಿಯೆಸ–
ಗಿರಲ್ಕೈ, ರಾಮಾ ! ” ೫೦

ಎನೆ ಭಾರ್ಗವರಾ–
ಮನು, ಕೂರ್ಗಣೆ ನೆ–
ಟ್ಟನೆ ಸಿಡಿದುದು ರಾ–
ಮನ ಬಿಲ್ಲಿಂದೆ ೫೧

ಒಣಗಿದ ಹೆಮ್ಮರ–
ಕೆಣೆಯುವನಾದನು
ಕ್ಷಣದೊಳು ಭೃಗುಕುಲ–
ಮಣಿ ಕಳೆಗುಂದಿ ! ೫೨

ನಲಿಯೆ ನೃಪತಿ, ನಿ–
ಷ್ಫಲತಪನು ಗತ–
ಚ್ಛಲನು ಮಹೇಂದ್ರಾ–
ಚಲಕೆ ನಡೆದನು ೫೩

ಚೆಂದದಯೋಧ್ಯೆಗೆ
ಬಂದನು ನೃಪನಾ–
ನಂದವು ಕೆಯ್ಮಿಗೆ
ನಂದನರೊಡನೆ ೫೪

ಪರಮಾನಂದದೊ–
ಳಿರುತೊಮ್ಮರಸನು
ಕರೆದನು ನುಡಿದನು
ಭರತನಿಗಿಂತು ೫೫

" ಭರತಾ, ನಿನ್ನನು
ಕರೆಯುಲಿದೋ ಸೋ-
ದರಮಾವನು ಬಂ–
ದಿರುವನು, ವತ್ಸಾ ! ೫೬

" ನಡೆವುದು ಶತ್ರುಹ–
ನೊಡನೆ " ನೆ, ಮಾತುಲ-
ನೊಡನಾಬಂಧುಗ–
ಳೊಡನೆ ನಡೆದರು ೫೭

ಗುರುಸೇವಾತ–
ತ್ಪರೆಯರು ಮುದವಿ–
ತ್ತರು ಸೊಸೆಯಂದಿರು
ನರನಾಥನಿಗೆ ೫೮

ನಲಿನಲಿದನು ರಘು–
ಕುಲತಿಲಕನ ಗುಣ–
ಜಲನಿಧಿಯಲಿ ನೃಪ–
ನೊಲಿದೋಲಾಡಿ. ೫೯

ಶ್ರೀರಘುಕುಲಮಣಿ
ವೀರಶಿರೋಮಣಿ
ಕಾರುಣಿಕಾಗ್ರಣಿ
ತಾರಕ ಶರಣು ೬೦

ಇದು ಅಷ್ಟಮಾಧ್ಯಾಯವು.

ಬಾಲಕಾಂಡವು ಸಮಾಪ್ತವು.